# ಚಂದಮಾಮ ಕ್ಯಾಮಲ್
## ಬಣ್ಣಹಾಕುವ ಸ್ಪರ್ಧೆ
ಪ್ರವೇಶಧನವಿಲ್ಲ



**ಬಹುಮಾನ ಗಳಿಸಿರಿ.**

ಕ್ಯಾಮಲ್—ಪ್ರಥಮ ಬಹುಮಾನ ರೂ. 15
ಕ್ಯಾಮಲ್—ದ್ವಿತೀಯ ಬಹುಮಾನ ರೂ. 10
ಕ್ಯಾಮಲ್—ತೃತೀಯ ಬಹುಮಾನ ರೂ. 5
ಕ್ಯಾಮಲ್—5 ಪ್ರೋತ್ಸಾಹಕ ಬಹುಮಾನಗಳು
ಕ್ಯಾಮಲ್—10 ಸರ್ಟಿಫಿಕೇಟ್‌ಗಳು

ಚುಕ್ಕೆ ಗೆರೆಯ ಉದ್ದಕ್ಕೂ ಕತ್ತರಿಸಿ.

ಕೇವಲ 12 ವರ್ಷದ ವರೆಗಿನ ಪ್ರಾಯದ ವಿದ್ಯಾರ್ಥಿಗಳು ಭಾಗವಹಿಸಬಹುದು ■ ಮೇಲಿನ ಚಿತ್ರಕ್ಕೆ ಯಾವುದೇ 'ಕ್ಯಾಮಲ್' ಬಣ್ಣಗಳಿಂದ ಬಣ್ಣ ಹಾಕಿರಿ ■ ಬಣ್ಣ ಹಾಕಿದ ಪ್ರವೇಶಪತ್ರಗಳನ್ನು ಕೆಳಗಿನ ವಿಳಾಸಕ್ಕೆ ಕಳಿಸಿರಿ
**P.B. No. 9928, COLABA, Bombay-400 005.**
ಫಲಿತಾಂಶವು ಅಂತಿಮ ನಿರ್ಣಯವಾಗಿದೆ, ಮತ್ತು ಇದರ ಸಲುವಾಗಿ ಪತ್ರವ್ಯವಹಾರಕ್ಕೆ ಗಮನ ಕೊಡಲಾಗುವುದಿಲ್ಲ.

Name ______________________ Age ____________

Address ______________________________________

ದಯವಿಟ್ಟು ನಿಮ್ಮ ಹೆಸರು ಮತ್ತು ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

ದಯವಿಟ್ಟು ಚಿತ್ರವನ್ನು ಪೂರ್ತಿಯಾಗಿ ಬಣ್ಣದಿಂದ ತುಂಬಿರಿ.
ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಕು: *31-10-1979*

vision

**CONTEST NO. 11**




# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಮಕ್ಕಳೆಲ್ಲರೂ ಆರೋಗ್ಯವಾಗಿ ಹುಟ್ಟುವರೆಂದು ಹೇಳಲಾಗುವುದಿಲ್ಲ. ಆದರ ಕಾರಣಗಳಲ್ಲಿ ಅನೇಕ ಸೂಕ್ಷ್ಮಗಳು ಅಡಗಿರಬಹುದು. ಆದನ್ನು ಸಾವಧಾನ, ಸಹನೆಗಳಿಂದ ತಿಳಿದು ಆರೈಕೆ ಮಾಡಿದರೆ ಶುಭ ಫಲ ಉಂಟಾಗಬಹುದು. ಆದನ್ನು ಬಿಟ್ಟು ಬೇಸರಪಟ್ಟು ನಿರಾಕರಣೆ ತೋರಿದರೆ ಮುಂದೆ ಪಶ್ಚಾತ್ತಾಪ ಪಡಬೇಕಾಗುತ್ತದೆ. ಈ ಸಂಚಿಕೆಯ ಪುರಾಣ ಬಾಲ "ಭದ್ರಾಯು" ಇದಕ್ಕೊಂದು ಒಳ್ಳೆಯ ನಿದರ್ಶನಾಗಿದ್ದಾನೆ.

## ಅಮರವಾಣಿ

ಕಂಟಕಾನಾಂ ಖಲಾನಾಂ ಚ ದ್ವಿವಿಧೈವ ಪ್ರತಿಕ್ರಿಯಾ
ಉಪಾನನ್ಮುಖ ಭಂಗೋ ವಾ ದೂರತೋ ವಾ ವಿಸರ್ಜನಮ್

ಮುಳ್ಳಿಗೂ ದುಷ್ಟರಿಗೂ ಎರಡು ಬಗೆಯ ಪ್ರತೀಕಾರವಿದೆ. ಚಪ್ಪಲಿಯಿಂದ ಮುಖಕ್ಕೆ ಹೊಡೆಯುವುದೊಂದಾದರೆ ಇನ್ನೊಂದನ್ನು ದೂರ ಬಿಸುಡುವುದು.

ಸಂಪುಟ: ೬೩ ಅಕ್ಟೋಬರ್ '೭೯ ಸಂಚಿಕೆ: ೪

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦



# ಪ್ರಶ್ನೋತ್ತರಗಳು

**ಸಿ. ಶೇಕಣ್ಣ, ರಾಯಚೂರು (ಕರ್ನಾಟಕ)**

ಪ್ರ: ಬೇಸಿಗೆ ಕಾಲದಲ್ಲಿ ಸ್ವಲ್ಪ ದೂರ ಕಣ್ಣೋಡಿಸಿ ನೋಡುವಾಗ ಗ್ಯಾಸ್‌ಸ್ಟೌ ಉರಿಯುವ ಹಾಗೆ ಕಾಣುತ್ತದೆ. ಕೇವಲ ಬಿಸಿಲು ಕಾಲದಲ್ಲಿ ಮಾತ್ರ ಹಾಗೆ ಕಾಣಲು ಕಾರಣವೇನು ?

ಉ: ಬಿಸಿಲು ಕಾಲದಲ್ಲಿ ನೆಲವು ಚೆನ್ನಾಗಿ ಕಾದು ಬಿಸಿಯೇರಿ ಬಿಡುವುದರಿಂದ ನೆಲಕ್ಕೆ ಸಮೀಪವಾಗಿದ್ದ ಗಾಳಿಯೂ ಬಿಸಿಯಾಗಿ ಹಗುರಾಗಿ ಮೇಲಕ್ಕೆ ಹೋಗುತ್ತದೆ. ಅಷ್ಟರ ಮಟ್ಟಿಗೆ ಬಿಸಿಯಿಲ್ಲದ ಮೇಲಿನ ಗಾಳಿ ಹೆಚ್ಚು ಭಾರವಾಗಿರುವುದರಿಂದ ಕೆಳಕ್ಕೆ ಇಳಿಯುತ್ತದೆ. ಈ ಎರಡು ಬಗೆಯ ಗಾಳಿ ಒಂದನ್ನೊಂದು ಇದಿರಿಸುತ್ತ ಕೂಡಿದಾಗ ಅವುಗಳ ಮೂಲಕ ಉಂಟಾಗುವ ಕಾಂತಿಯ ಪ್ರಸಾರವು ಭಿನ್ನವಾಗಿರುವುದರಿಂದ, ದೂರದಲ್ಲಿರುವ ವಸ್ತುಗಳು ಕಂಪಿಸಿದಂತೆ ನಮಗೆ ಕಾಣುತ್ತವೆ. ಉರಿಯುವ ಸ್ಟೌವಿನ ಮೇಲು ಭಾಗದಲ್ಲಿಕೂಡಾ ಹೀಗೆಯೇ ಕಾಣಿಸಲು ಇದೇ ಕಾರಣ. ತಣ್ಣಗಿನ ಗಾಳಿಯೊಳಗಿನಿಂದ ಬರುವ ಕಾಂತಿ ಬಿಸಿಯೇರಿದ ಗಾಳಿಯೊಳಗೆ ನುಸುಳುವಾಗ ವಕ್ರೀಕರಣ ಹೊಂದುತ್ತದೆ.

**ಸಿಹೆಚ್. ಸುಧಾ, ನೆಲ್ಲೂರು (ಆಂಧ್ರ)**

ಪ್ರ: ನಿದ್ದೆ ಅಂದರೇನು ? ಕಣ್ಣು ಮುಚ್ಚಿಕೊಂಡರೆ ಮಾತ್ರವೇ ನಿದ್ರೆ ಬರುವುದೋ ?

ಉ: ನಮ್ಮ ಮೆದುಳಿನ ಮೇಲು ಪೊರೆಯಲ್ಲಿ ಅನೇಕ "ಜ್ಞಾನ" ಕೇಂದ್ರಗಳಿವೆ. ಎಚ್ಚರದಲ್ಲಿರುವಾಗ ಹೊರಗಿನ ವಾತಾವರಣದ ಬದಲಾವಣೆಗಳಿಗೆ, ಅಂದರೆ ದೃಶ್ಯಗಳು, ಧ್ವನಿಗಳು ಮುಂತಾದುವುಗಳಿಗೆ ಅವು ಸ್ಪಂದಿಸುತ್ತಾ ಇರುತ್ತವೆ. ಮೆದುಳಿನ ಮೇಲಿನ ಪೊರೆಗಳು ವಿಶ್ರಾಂತಿ ಪಡೆದ ಹೊರತು ನಮಗೆ ನಿದ್ದೆ ಬಾರದು. ಆದುದರಿಂದ ಕಣ್ಣು ಮುಚ್ಚಿಕೊಳ್ಳದೆ ನಿದ್ದೆ ಮಾಡಲು ಸಾಧ್ಯವಾಗದು.

**ಓ. ವಿ. ಸುಂದರಕುಮಾರ್, ಬರಂಪುರಂ (ಒರಿಸ್ಸಾ)**

ಪ್ರ: "ಫಾನ್" ತಿರುಗದೆ ಸುಮ್ಮನಿರುವಾಗ ಅದರ ರೆಕ್ಕೆಗಳ ಹಿಂದಿರುವ ವಸ್ತುಗಳು ನಮಗೆ ಕಾಣುವುದಿಲ್ಲ. ಆದರೆ ಅದು ತಿರುಗುತ್ತಿರುವಾಗ ಹಿಂದಿನ ವಸ್ತುಗಳು ಸ್ಪಷ್ಟವಾಗಿ ಕಾಣಿಸುತ್ತವೆ. ಕಾರಣವೇನು ?

ಉ: "ಫಾನ್"ನ ರೆಕ್ಕೆಗಳ ನಡುವಿನ ಖಾಲೀ ಜಾಗೆಗಳ ಮೂಲಕ ಹಿಂದಿನಲ್ಲಿರುವ ವಸ್ತುಗಳನ್ನು ನಾವು ಅದು ತಿರುಗುವಾಗ ನೋಡುತ್ತೇವೆ. ಒಂದು ಸಾರಿ ಕಣ್ಣಿಗೆ ಬಿದ್ದ ದೃಶ್ಯ ಸೆಕೆಂಡಿನ ಹತ್ತರಲ್ಲೊಂದು ಕಾಲದೊಳಗೆ ಕಣ್ಣಿನೊಳಗಿಂದ ಹೋಗದು. ಅಷ್ಟರೊಳಗೆ ಫಾನಿನ ರೆಕ್ಕೆ ದಾಟಿ ಹೋಗುತ್ತದೆ. ಆದುದರಿಂದ ನಾವು ಫಾನಿನ ಹಿಂದೆ ಇರುವ ವಸ್ತುಗಳನ್ನು ನೋಡುತ್ತೇವೆ. ಇದಕ್ಕಿಂತ ಒಳ್ಳೆಯ ಉದಾಹರಣೆಯೆಂದರೆ, ನಮ್ಮ ಕಣ್ಣಿನಿಂದ ಕೆಲಸ ಮಾಡುವಾಗ ರೆಪ್ಪೆ ಆಡಿಸುತ್ತಾ ಇರುತ್ತೇವೆ. ಆದರೆ ನಾವು ನೋಡುವುದು ಅದೃಶ್ಯವಾಗಿ ಮತ್ತೆ ಕಾಣಿಸುವುದೆಂಬ ಭಾವನೆ ನಮಗೆ ಬರುವುದಿಲ್ಲ.




೨೫

### ತಿರುಗಿಬದುಕಿದ ಸಿಂಹ

ಒಂದು ಊರಿನಲ್ಲಿ ನಾಲ್ಕುಮಂದಿ ಬ್ರಾಹ್ಮಣರು ಮಿತ್ರರಾಗಿದ್ದರು. ಅವರೊಳಗೆ ಮೂವರು ಸಮಸ್ತ ಶಾಸ್ತ್ರಗಳನ್ನೂ ಕಲಿತು ಪಾರಂಗತರಾಗಿ ಮಹಾ ಪಂಡಿತರೆನಿಸಿದವರು. ಅವರಿಗೆ ಪಾಂಡಿತ್ಯವೆಲ್ಲ ಚೆನ್ನಾಗಿದ್ದರೂ ಲೋಕಜ್ಞಾನವೇನೂ ಇರಲಿಲ್ಲ. ಕಾರಣ ಅವರು ಓದುಬರೆಹ ಅಧ್ಯಯನಗಳಲ್ಲೇ ತಮ್ಮ ಕಾಲವನ್ನು ವ್ಯಯಿಸಿದವರು. ಮೂರನೇ ಬ್ರಾಹ್ಮಣನು ಮಾತ್ರ ಯಾವ ಶಾಸ್ತ್ರಗ್ರಂಥಗಳನ್ನೂ ಕಲಿತವನಲ್ಲ. ಆದರೆ ಅವನಿಗೆ ಲೋಕಜ್ಞಾನವು ಪುಷ್ಕಳವಾಗಿದ್ದಿತು.

ಒಂದು ದಿನ ಆ ನಾಲ್ಕುಮಂದಿ ಬ್ರಾಹ್ಮಣರೂ ಒಂದು ಕಡೆಯಲ್ಲಿ ಕೂಡಿ, "ನಾವು ಕಲಿತ ವಿದ್ಯೆಗೆ ಪ್ರಯೋಜನ ಬರಬೇಕಾದರೆ ಇಲ್ಲೇ ಇದ್ದರೆ ಸಾಧ್ಯವಿಲ್ಲ. ದೇಶಗಳಲ್ಲಿ ತಿರುಗುತ್ತ, ರಾಜರನ್ನು ಮೆಚ್ಚಿಸಿ ಬಹುಮಾನಗಳನ್ನು ಪಡೆಯಬೇಕು. ಆದುದರಿಂದ ನಾವು ದೇಶಸಂಚಾರಕ್ಕೆ ಹೊರಡೋಣ, ಎಂದು ಮಾತಾಡಿಕೊಂಡು ಮೂವರೂ ಹೊರಡಲು ನಿಶ್ಚಯಿಸಿದರು. ಸ್ನೇಹಿತನಾದ ನಾಲ್ಕನೆಯವನೂ ಅವರೊಂದಿಗೆ ತಾನೂ ಬರುವೆನೆಂದು ಹೊರಟನು. ಅವರು ಸ್ವಲ್ಪ ದೂರ ಪ್ರಯಾಣ ಮಾಡಿದ ಮೇಲೆ, ಅವರೊಳಗೆ ದೊಡ್ಡವನು ಹೀಗೆಂದನು :

"ನಮ್ಮೊಳಗೆ ಒಬ್ಬನಿಗೆ ಲೋಕಜ್ಞಾನವಿದೆ ಎಂಬ ಮಾತೇ ಹೊರತು ಪಾಂಡಿತ್ಯವೆಂದರೇನೆಂಬುದರ ಹಸಿಬಿಸಿಯೂ ತಿಳಿಯದು. ಲೋಕಜ್ಞಾನವಿದೆಯೆಂದ ಮಾತ್ರಕ್ಕೆ ಯಾವ ರಾಜನೂ ಸನ್ಮಾನ ಮಾಡುವುದಿಲ್ಲ. ಉಳಿದ ನಾವು ಮೂವರು ಬಹುಮಾನ ಪಡೆಯುತ್ತೇವೆ, ಅಂದ ಮಾತ್ರಕ್ಕೆ ಅದರಿಂದೇನೂ ಅವನಿಗೆ ಲಾಭವಾಗಲಾರದು. ನಾವಾಗಿ ಕೊಟ್ಟರೆ ಹೊರತು ಅವನಿಗೆ ಕೇಳುವ ಹಕ್ಕಂತೂ ಇಲ್ಲವಷ್ಟೆ? ಅವನು ನಮ್ಮೊಂದಿಗೇಕೆ?" ಎಂದನು. ಎರಡನೇ ಪಂಡಿತನು ಲೋಕಜ್ಞಾನಿಯೊಂದಿಗೆ, "ನೀನೇನೂ ಪಂಡಿತನಲ್ಲ. ಮನೆಗೆ ಹೋಗಿಬಿಡು" ಎಂದನು. ಆಗ ಮೂರನೇ ಪಂಡಿತನು, "ನಾವು ಅವನನ್ನು ಮನೆಗೆ ಹಿಂದಿರುಗಿ ಹೋಗೆಂದು ಹೇಳುವುದು ಅನ್ಯಾಯ. ನಾವು ನಾಲ್ವರೂ ಚಿಕ್ಕಂದಿನಿಂದ ಕೂಡಿಯಾಡಿ ಬೆಳೆದವರು. ಇವನನ್ನು ಕೂಡಾ ನಮ್ಮೊಂದಿಗೆ



ಕರೆದುಕೊಂಡು ಹೋಗಿ ನಮ್ಮ ಸಂಪಾದನೆಯ ಒಂದು ಭಾಗ ಕೊಡೋಣ. ಅದೇ ನ್ಯಾಯ" ಎಂದನು.

ಅದಕ್ಕೆ ಮೊದಲಿನವರಿಬ್ಬರೂ ಒಪ್ಪಿಕೊಂಡ ಮೇಲೆ ನಾಲ್ವರೂ ಮುಂದೆ ಪ್ರಯಾಣಮಾಡಿದರು.

ಹಾಗೆ ಹೋಗುತ್ತಾ ಅವರು ಒಂದು ಅರಣ್ಯವನ್ನು ಪ್ರವೇಶಿಸಿದರು. ಅಲ್ಲಿ ಒಂದು ಕಡೆ ಸತ್ತು ಹೋದ ಒಂದು ಸಿಂಹದ ಎಲುಬಿನ ಗೂಡು ಬಿದ್ದಿರುವುದನ್ನು ನೋಡಿದರು. ಅವುಗಳನ್ನು ನೋಡಿ ಒಬ್ಬ ಪಂಡಿತನು, "ಈಗ ನಾವು ನಮ್ಮ ವಿದ್ಯೆಗಳನ್ನು ನಿರೂಪಿಸಿಕೊಳ್ಳಬಹುದಲ್ಲ? ನಮ್ಮ ಶಕ್ತಿಯಿಂದ ಈ ಸಿಂಹವನ್ನು ಮತ್ತೆ ಬದುಕಿಸಿಬಿಡೋಣ. ನಾನು ಈ ಸಿಂಹದ ಎಲುವುಗಳನ್ನು ಎಲ್ಲೆಲ್ಲಿ ಹೇಗಿರಬೇಕೋ ಹಾಗೆ ಅಳವಡಿಸಬಲ್ಲೆ" ಎಂದನು.

"ನಾನು ಸಿಂಹಕ್ಕೆ ಚರ್ಮವನ್ನೂ ಕೇಸರವನ್ನೂ, ಮಾಂಸ ಖಂಡಗಳನ್ನೂ ರಕ್ತವನ್ನೂ ಸೃಷ್ಟಿಸಿಬಿಡಬಲ್ಲೆ." ಎಂದನು ಮಂತ್ರವೇತ್ತನಾದ ಎರಡನೇ ಪಂಡಿತ.

"ನೀವಿಬ್ಬರೂ ಅಷ್ಟು ಮಾಡಿಬಿಟ್ಟರೆ ನಾನು ಆ ಸಿಂಹಕ್ಕೆ ಪ್ರಾಣಬರುವ ಹಾಗೆ ಮಾಡುತ್ತೇನೆ" ಎಂದನು ಮೂರನೇ ಪಂಡಿತ.

ಮೂವರಿಗೂ ಉತ್ಸಾಹ ಉಕ್ಕಿಬಿಟ್ಟಿತ್ತು. ಅಂದ ಹಾಗೆಯೇ ಒಬ್ಬನು ಸಿಂಹದ ಅಸ್ಥಿಪಂಜರವನ್ನು, ನಖಗಳು ಕೋರೆ ಹಲ್ಲುಗಳನ್ನು ಸರಿಗೊಳಿಸಿಟ್ಟನು. ಎರಡನೆಯವನಿಂದ ಅದಕ್ಕೆ ಚರ್ಮ ಮಾಂಸ, ರಕ್ತಗಳು ಬಂದುವು. ಮೂರನೆಯವನು ಆ ಸಿಂಹಕ್ಕೆ ಪ್ರಾಣದ ಗಾಳಿ ಊದಬೇಕೆಂದಿರುವಾಗ ನಾಲ್ಕನೆಯವನು, "ಬೇಡಿ! ಇದು ಸಿಂಹ. ಇದಕ್ಕೆ ಪ್ರಾಣ ಬರುವ ಹಾಗೆ ಮಾಡಿದರೆ ಇದು ನಮ್ಮನ್ನೆಲ್ಲಾ ಕೊಂದು ಹಾಕೀತು." ಎಂದನು.

ಅದಕ್ಕೆ ಮೂರನೇಯವನು: "ಛೀ! ಮೂಢನೇ! ಹೆದರಿಕೆಯ ಪುಕ್ಕಾ! ಇವರಿಬ್ಬರು ಇಲ್ಲಿ ತಮ್ಮ ಬುದ್ಧಿವಂತಿಕೆ ತೋರಿಸಿದಾಗ, ನನ್ನ ಶಕ್ತಿಗೆ ಅವಮಾನವಾಗುವ ಹಾಗೆ ತಡೆ ಮಾತು ಹೇಳುವೆಯಲ್ಲ! ಬಾಯಿ ಮುಚ್ಚಿರು" ಎಂದನು.

ಲೋಕಜ್ಞಾನ ಉಳ್ಳವನು. "ನಿನ್ನ ಇಷ್ಟದಂತೆಯೇ ಮಾಡಯ್ಯ. ನಾನು ಮಾತ್ರ ಈ ಮರದ ಮೇಲೆ ಏರುತ್ತೇನೆ. ನೀನು ಪುಕ್ಕನೆಂದರೂ ನನಗೇನೂ ಅವಮಾನವಾಗದು" ಎಂದು ಹೇಳಿ ಸಮೀಪದಲ್ಲಿದ್ದ ಮರದ ಮೇಲೆ ಹತ್ತಿಬಿಟ್ಟನು.

ಮೂರನೇ ಪಂಡಿತನು ಸಮಂತ್ರಕವಾಗಿ ಪ್ರಾಣವಾಯುವನ್ನು ಊದಿದನು. ಆ ಕೂಡಲೇ ಸಿಂಹವು ಹಾರಿ ಎದ್ದು ವಿಜೃಂಭಿಸಿ ಗರ್ಜಿಸಿ ಸಮೀಪದಲ್ಲಿದ್ದ ಮೂವರು ಪಂಡಿತರನ್ನೂ ಕೊಂದು ಹಾಕಿ, ಓಡಿ ಹೋಯಿತು. ಆಮೇಲೆ ಲೋಕಜ್ಞಾನಿ ಮರದಿಂದಿಳಿದು, ಕ್ಷೇಮವಾಗಿ ಮನೆ ಸೇರಿದನು.

ಅತಿಲೋಭಿ ಅತ್ಯಂತಲೋಭಿಗೆ ಈ ಕಥೆಯನ್ನು ಹೇಳಿ ಮುಗಿಸಿ, "ಒಂದೇ ತಾವರೆ ಹೂವಿನಿಂದ ಪುಷ್ಕರಿಣಿಯಾಗಲಾರದು. ಹಾಗೆಯೇ ಈ ಒಂದೇ

ಕಥೆಯಲ್ಲಿ ಬರುವ ನೀತಿಯೂ ಬುದ್ಧಿಗೆ ಸಾಲದು. ಇಂತಹ ಕಥೆಗಳು ಇನ್ನೂ ಅನೇಕ ಇವೆ" ಎಂದು ಮತ್ತೊಂದು ಕಥೆ ಹೇಳಿದನು :

## ಓದಿಕೊಂಡ ಮೂರ್ಖರು

ಒಂದು ಕಾಲದಲ್ಲಿ ಉಜ್ಜಯಿನಿಯಲ್ಲಿ ನಾಲ್ಕು ಮಂದಿ ಬ್ರಾಹ್ಮಣ ಯುವಕರು ಸ್ನೇಹವಾಗಿದ್ದರು. ಅವರು ನಾಲ್ಕುಮಂದಿಯೂ ಕೂಡಿ ಮಾತಾಡಿ ಕೊಂಡು ದೇಶಾಂತರಗಳಿಗೆ ಹೋಗಿ ವಿದ್ವಾಂಸರಾಗಿ ಬರಬೇಕೆಂದು ನಿಶ್ಚಯಿಸಿಕೊಂಡರು. ಹಾಗೆ ಅವರು ಹೊರಟು ಕನ್ಯಾಕುಬ್ಜಕ್ಕೆ ಹೋಗಿ, ಒಬ್ಬ ಪ್ರಸಿದ್ಧ ನಾದ ಗುರುವಿನ ಹತ್ತಿರ ಹನ್ನೆರಡು ವರ್ಷ ಇದ್ದು ಬಹಳ ಶ್ರದ್ಧೆಯಿಂದ ಓದಿಕೊಂಡರು.

ಅವರು ವಿದ್ಯಾಭ್ಯಾಸವನ್ನು ಪೂರ್ತಿಗೊಳಿಸಿ ಗುರುವಿನಿಂದ ಅಪ್ಪಣೆ ಪಡೆದು ತಮ್ಮ ಗ್ರಂಥಗಳನ್ನು ತೆಗೆದುಕೊಂಡು ಉಜ್ಜಯಿನಿಗೆ ಹಿಂದಿರುಗತೊಡ ಗಿದರು. ಆಗ ಹೊಸ ಪ್ರಾಂತಗಳನ್ನು ನೋಡಿದ ಹಾಗಾಗುವುದೆಂದೂ, ತಿಳಿಯದ ದಾರಿಯಲ್ಲಿ ಪ್ರಯಾಣಮಾಡಿದರೆ ಬುದ್ಧಿಶಕ್ತಿಯನ್ನು ಹೆಚ್ಚಿಸಿ ಕೊಳ್ಳಬಹುದೆಂದೂ ಅಂದುಕೊಂಡು, ಹೊಸ ದಾರಿ ಯಿಂದ ಪ್ರಯಾಣಮಾಡುತ್ತಿದ್ದರು.

ಅವರು ಸ್ವಲ್ಪ ದೂರ ಹೋದ ಮೇಲೆ ಅಲ್ಲಿ ದಾರಿ ಎರಡಾಗಿ ಸೀಳಿ ಬೇರೆ ಬೇರೆ ದಿಕ್ಕುಗಳಿಗೆ ಹೋಗುತ್ತಿತ್ತು. ಯಾವ ದಾರಿ ಹಿಡಿಯಬೇಕೆಂದು ಅವರಿಗೆ ಗೊತ್ತಾಗಲಿಲ್ಲ. ಒಬ್ಬನು ಹೀಗೆಂದನು :

"ಯಾವ ದಾರಿಯಿಂದ ಹೋಗಬೇಕೆಂದಲ್ಲವೇ ಇದಿರಿನಲ್ಲಿರುವ ಸಮಸ್ಯೆ. ನನ್ನ ಗ್ರಂಥವು ಏನು ಹೇಳುವುದೆಂದರೆ, ಓದಿಕೊಂಡವನಿಗೆ ಅವನ ಕರ್ತವ್ಯ ವೇನೆಂಬುದು ತನ್ನಂತಾನೇ ಗೊತ್ತಾಗಿ ಬಿಡುತ್ತದೆ. ಅವನು ಬೇರೆ ಕೆಲವರನ್ನು ಕೇಳಬೇಕಾದ ಅಗತ್ಯವಿಲ್ಲ. ಆದರೆ ಮೂಢನು ಯಾವಾಗಲೂ ಇತರರ ಸಲಹೆಯ ಮೇಲೆಯೇ ಆಧಾರವಾಗಿರುತ್ತಾನೆ. ಆದುದರಿಂದ



ನಾವು ಯಾವ ದಾರಿ ಹಿಡಿಯಬೇಕೆಂದು ಬೇರೆಯವ ರನ್ನು ಕೇಳಲೇ ಬಾರದು. ಅದನ್ನು ನಾವೇ ನಿಶ್ಚಯಿಸಿ ಕೊಳ್ಳೋಣ."

ನಾಲ್ವರೂ ದಾರಿ ಸೀಳುವ ಸ್ಥಳದಲ್ಲಿ ಕುಳಿತು ಕೊಂಡು ತಮ್ಮ ತಮ್ಮ ಗ್ರಂಥಗಳನ್ನು ತೆರೆದು ಪರಿಶೀಲಿಸ ತೊಡಗಿದರು. ಅದೇ ಸಮಯದಲ್ಲಿ ಆ ದಾರಿಗಳಲ್ಲಿ ಒಂದರಲ್ಲಿ ಒಂದು ಶವದ ಮೆರವಣಿಗೆ ಹೋಗ ತೊಡಗಿತು.

ಅದನ್ನು ನೋಡಿ ಓದಿಕೊಂಡ ನಾಲ್ವರಲ್ಲಿ ಒಬ್ಬನು, "ಸಮಸ್ಯೆ ತೀರಿಹೋಯಿತು. ನಾಲ್ಕುಮಂದಿ ನಡೆದ ದಾರಿಯಲ್ಲೇ ನಡೆಯಬೇಕೆಂದು ನನ್ನ ಗ್ರಂಥದಲ್ಲಿ ಹೇಳಿದೆ. ಆದುದರಿಂದ ನಾವು ಈ ಜನರು ಹೋಗುವ ದಾರಿಯಲ್ಲೇ ಹೋಗೋಣ" ಎಂದನು.

ಸಮಸ್ಯೆ ಇಷ್ಟು ಸುಲಭದಲ್ಲಿ ಪರಿಹಾರವಾದು ದನ್ನು ನೋಡಿ ಉಳಿದ ಮೂವರೂ ಸಂತೋಷದಿಂದ ಕುಣಿದಾಡಿದರು. ಅವರು ಶವದ ಮೆರವಣಿಗೆಯ

ಹಿಂದೆಯೇ ಹೋಗಿ ಬೇಗದಲ್ಲೇ ಸ್ಮಶಾನವನ್ನು ತಲಪಿದರು. ಆ ದಾರಿ ಅಲ್ಲಿಗೇ ನಿಂತುಹೋಗಿತ್ತು.

ವಿದ್ಯೆ ಕಲಿತ ನಾಲ್ವರೂ ಚಿತೆಗೆ ಸ್ವಲ್ಪದೂರದಲ್ಲೇ ನಿಂತು ಈಗೇನು ಮಾಡಬೇಕೆಂದು ಆಲೋಚಿಸ ತೊಡಗಿದರು. ಆಗ ಅಲ್ಲಿ ಒಂದು ಕತ್ತೆ ನಿಂತಿರುವುದು ಅವರ ಕಣ್ಣಿಗೆ ಬಿತ್ತು.

"ಇದಕ್ಕೇನೋ ಅರ್ಥವಿರಲೇ ಬೇಕು. ನಮ್ಮೊಂದಿಗೆ ಈ ಕತ್ತೆ ಕೂಡಾ ಅರ್ಥವಿಲ್ಲದೆ ಸುಮ್ಮನೆ ನಿಂತಿರಲು ಸಾಧ್ಯವಿಲ್ಲ. ಅದೇನು ಅರ್ಥವಿದ್ದೀತು ?" ಎಂದ ನೊಬ್ಬ ವಿದ್ವಾಂಸ.

ಕೂಡಲೇ ಮತ್ತೊಬ್ಬನು ಗ್ರಂಥ ಬಿಡಿಸಿ ನೋಡಿ, "ಗೊತ್ತಾಯಿತು. ಈ ಕತ್ತೆ ನಮ್ಮ ಮಿತ್ರನೇ. 'ರಾಜದ್ವಾರೇ ಸ್ಮಶಾನೇ ಚ ಯಸ್ತಿಷ್ಠತಿ ಸಬಾಂಧವಃ' ಎಂದು ನನ್ನ ಗ್ರಂಥದಲ್ಲಿದೆ. ಆದುದರಿಂದ ನಾವು ಈ ಕತ್ತೆಯನ್ನು ಸ್ನೇಹಪೂರ್ವಕವಾಗಿ ಮಾತಾಡಿಸೋಣ" ಎಂದು ಹೇಳಿದನು.

ಒಬ್ಬನು ಹೋಗಿ ಕತ್ತೆಯ ಕುತ್ತಿಗೆಯನ್ನು ಆಪ್ಯಾಯತೆಯಿಂದ ಆಲಿಂಗಿಸಿಕೊಂಡನು. ಮತ್ತೊಬ್ಬನು ಅದರ ಪಾದಗಳನ್ನು ತೊಳೆದನು. ಇನ್ನೊಬ್ಬನು ಅದರ ಮೂತಿಗೆ ಮುದ್ದಿತ್ತನು. ನಾಲ್ಕನೇಯವನು "ಅಪರೂಪ, ಬಹುಕಾಲ ದರ್ಶನ" ಎಂದು ಮಾತಾಡಿಸಿ ಆನಂದಬಾಷ್ಪ ಉದುರಿಸಿದನು.

ಅವರ ಪ್ರವರ್ತನೆಯನ್ನು ನೋಡಿ ಶವದೊಂದಿಗೆ ಬಂದವರು, ಅಂತಹ ವಿಷಾದದ ವೇಳೆಯಲ್ಲಿಯೂ ಹೊಟ್ಟೆ ಹಿಡಿದುಕೊಂಡು ನಕ್ಕರು.

ಅಷ್ಟರಲ್ಲಿ ಒಂದು ಒಂಟೆ ತನ್ನ ಯಜಮಾನನಿಂದ ತಪ್ಪಿಸಿಕೊಂಡು ಓಡುತ್ತಾ ಆ ಕಡೆಗೇ ಬಂತು. "ಇದರ ಅರ್ಥ ಏನಿರಬಹುದು?" ಎಂದು ಒಬ್ಬ ವಿದ್ವಾಂಸನು ಕೇಳಿದನು.

"'ಧರ್ಮಸ್ಯ ತ್ವರಿತಾ ಗತಿ' ಎಂದು ನನ್ನ ಪುಸ್ತಕದಲ್ಲಿದೆ. ಇದು ಓಡುತ್ತಾ ಬಂದುದರಿಂದ ಧರ್ಮವೇ ಒಂಟೆಯ ರೂಪದಲ್ಲಿ ಓಡಿ ಬಂದಿದೆ" ಎಂದನು ಮತ್ತೊಬ್ಬ ವಿದ್ವಾಂಸ.

ಮೂರನೇ ವಿದ್ವಾಂಸನು "ಇಷ್ಟಂ ಧರ್ಮೇಣ ಯೋಜಯೇತ್ ಎಂದು ನನ್ನ ಗ್ರಂಥದಲ್ಲಿ ಹೇಳಿದೆ. ಅಂದರೆ ನಮಗೆ ಇಷ್ಟವಾದುದನ್ನು ಧರ್ಮದೊಂದಿಗೆ ಸಂಬಂಧಿಸಿಕೊಳ್ಳಬೇಕು ಎಂದಾಗುತ್ತದೆ. ಆದುದರಿಂದ ನಾವೀಗ ಕತ್ತೆಯನ್ನೂ ಒಂಟೆಯನ್ನೂ ಒಂದಾಗಿ ಕಟ್ಟಿಬಿಡೋಣ." ಎಂದನು.

ನಾಲ್ವರೂ ಸೇರಿ ಬಹಳ ಕಷ್ಟದಿಂದ ಉರುಳಾಡಿ ಕತ್ತೆಯನ್ನೂ ಒಂಟೆಯನ್ನೂ ಹಗ್ಗದಿಂದ ಕಟ್ಟಿ ಜೋಡಿಸಿದರು. ಆ ಪ್ರಾಣಿಗಳಿಂದ ಬಹಳ ಒದೆಗಳನ್ನು ತಿಂದರೂ ಕೆಲಸ ಮುಗಿಸದೆ ಬಿಡಲಿಲ್ಲ; ಸ್ಮಶಾನದಲ್ಲಿದ್ದವರೆಲ್ಲಾ ಬಿದ್ದು ಬಿದ್ದು ನಕ್ಕರು.





# ಇಂಗಿತಜ್ಞಾನ

ಹಟದೊಂದಿಗೆ ವಿಮರ್ಶಕ ಬುದ್ಧಿಯನ್ನು ಮಸೆದಿಟ್ಟುಕೊಂಡವನಾದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಹೆಗಲ ಮೇಲೇರಿಸಿಕೊಂಡು, ಎಂದಿನಂತೆ ಮೌನವಾಗಿ ನಡೆಯತೊಡಗಿದನು. ಆಗ ಶವದೊಳಗೆ ಆವೇಶಿತವಾಗಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ! ನಿನ್ನ ಒಳಿತಿಗೆ ಏನು ಮಾಡಬೇಕೆಂದು ಅರಿಯದೆ ಮೋಸ ಹೋಗುವೆಯೇನೋ ಎಂದು ನನಗೆ ಸಂದೇಹವಾಗಿದೆ. ಕೆಲವರು ತಮಗೆ ತಾನಾಗಿ ಬಂದ ಅದೃಷ್ಟವನ್ನು ತಿಳಿದುಕೊಳ್ಳಲಾಗದೆ ಕಳೆದುಕೊಳ್ಳುತ್ತಾರೆ. ಇದಕ್ಕೆ ನಿದರ್ಶನವಾಗಿ ನಿನಗೆ ವೀರವರ್ಮನ ಕಥೆಯನ್ನು ಹೇಳುತ್ತೇನೆ. ಕೇಳುತ್ತಾ ಇದ್ದರೆ ಶ್ರಮ ತಿಳಿಯದು" ಎಂದು ಕಥೆ ಹೇಳಲು ತೊಡಗಿತು :

ಹಿಂದೆ ಮಾಳವ ದೇಶದ ಪಟ್ಟಕ್ಕೆ ಬಾಧ್ಯನಾಗಿದ್ದ ರಾಜಕುಮಾರ ಕಲ್ಯಾಣವರ್ಮನಿಗೆ ವೀರವರ್ಮನೆಂಬವನು ಆಪ್ತಮಿತ್ರನಾದರೂ ವೀರವರ್ಮನು ದೊಡ್ಡ ರಾಜಮನೆತನದವನೇನಲ್ಲ; ರಾಜಾಸ್ಥಾನದ ಒಬ್ಬ ಉದ್ಯೋಗಸ್ಥನ ಮಗ, ಅಷ್ಟೇ. ಆದರೂ

ಬೇತಾಳಕಥೆಗಳು?..



ಕಲ್ಯಾಣವರ್ಮನು ಅವನನ್ನು ತನ್ನೊಂದಿಗೆ ಸಮಾನ ದೃಷ್ಟಿಯಿಂದ ನೋಡಿ ಆದರಿಸುತ್ತಿದ್ದನು. ಅದನ್ನು ಅವರಿಬ್ಬರೊಳಗೆ ಏನೋ ಪೂರ್ವಜನ್ಮ ಸಂಬಂಧವಿರ ಬೇಕೆಂದು ಎಲ್ಲರೂ ಅಂದುಕೊಳ್ಳುತ್ತಿದ್ದರು.

ಒಂದು ಸಾರಿ ವೀರವರ್ಮನು ಕುದುರೆಯ ಮೇಲೆ ಕುಳಿತು ಏಕಾಂಗಿಯಾಗಿ ಅರಣ್ಯದಲ್ಲಿ ಬೇಟೆ ಯಾಡಲು ಹೋದನು. ಆಗ ಅವನಿಗೆ ಸ್ತ್ರೀಕಂಠ ದಿಂದ ಹೊರಡುವ ಆರ್ತನಾದವೊಂದು ಕೇಳಿತು. ಕೂಡಲೇ ವೀರವರ್ಮನು ತನ್ನ ಕುದುರೆಯನ್ನು ಆ ಕಡೆಗೆ ಓಡಿಸಿದನು. ಅಲ್ಲಿ ಕುದುರೆಯ ಮೇಲೆ ಕುಳಿತಿದ್ದ ಒಬ್ಬಳು ಯುವತಿ, ಬೀಳದಂತೆ ಪೇಚಾಡಿಕೊಂಡು ಸಹಾಯ ಮಾಡುವಂತೆ ಕೂಗುತ್ತಿದ್ದಳು. ಕುದುರೆ ಅವಳು ಹೇಳಿದಂತೆ ಕೇಳದೆ, ಹಿಂಗಾಲುಗಳ ಮೇಲೆ ನಿಂತು, ಅವಳನ್ನು ಕೆಳಕ್ಕೆ ಉರುಳಿಸಲು ಭಾರೀ ಪ್ರಯತ್ನ ಮಾಡುತ್ತಿದ್ದಿತು. ಆ ಕುದುರೆಯ ಕಣ್ಣು ಗಳಲ್ಲಿ ಏನೋ ಭಯವು ಮನೆಮಾಡಿಕೊಂಡಂತೆ ಕಾಣುತ್ತಿತ್ತು. ಯಾವುದಕ್ಕೋ ಹೆದರಿದ ಆ ಕುದುರೆ ಅವಳನ್ನು ಹೊತ್ತುಕೊಂಡು ಸಿಕ್ಕಾಬಟ್ಟೆ ಓಡಿ ಬಂದಿರಬೇಕು.

ವೀರವರ್ಮನು ತಟ್ಟನೆ ತನ್ನ ಕುದುರೆಯನ್ನು ಆ ಕುದುರೆಯ ಮುಂದೆ ಒಯ್ದು, ಅದರ ಕಡಿವಾಣ ವನ್ನು ಹಿಡಿದು, ಅದರ ಮುಂದಿನ ಕಾಲುಗಳು ನೆಲದ ಮೇಲೆ ನಿಲ್ಲುವಂತೆ ಮಾಡಿದನು. ಸಮಾಧಾನದ ಶಬ್ದ ಗಳಿಂದ ಆ ಕುದುರೆಯನ್ನು ತಟ್ಟಿ ಪೂಸಿ ಅದರ ಭಯ ವನ್ನು ತಗ್ಗಿಸಿದನು.

ಆ ಕುದುರೆಯ ಮೇಲಿದ್ದವಳು ಕುದುರೆಗಿಂತ ಹೆಚ್ಚು ಹೆದರಿಬಿಟ್ಟಿದ್ದಳು. ಸಮಾಧಾನಕ್ಕೆ ಬಂದ ಮೇಲೆ ಅವಳು ತನ್ನ ಸಂಗತಿಯನ್ನು ವೀರವರ್ಮ ನೊಂದಿಗೆ ಹೇಳಿದಳು. ಅವಳು ಅರಣ್ಯದಾಚೆಗಿರುವ ಉದಯಗಿರಿಯ ರಾಜಕುಮಾರಿ. ಹೆಸರು ಸ್ವರ್ಣಕೇಶಿ. ವನವಿಹಾರ ಮಾಡಲು ತನ್ನ ಪರಿವಾರದೊಂದಿಗೆ ಬಂದಿದ್ದಳು. ಎಲ್ಲಿಯೋ ಒಂದು ಹೆಬ್ಬುಲಿಯ ಗರ್ಜನೆ ಕೇಳಿ ಅವಳ ಕುದುರೆ ಹದರಿ ಕಂಡಾಬಟ್ಟೆ ಓಡಿ ಬಂದಿತ್ತು. ಏನೂ ತೋರದೆ ಪ್ರಾಣಾಪಾಯದಲ್ಲಿ ಸಿಕ್ಕಿಬಿದ್ದ ತನ್ನನ್ನು ಕಾಪಾಡಿದ ವೀರವರ್ಮನಿಗೆ ಅವಳು ಕೃತಜ್ಞತೆ ತಿಳಿಸಿದಳು.

ಹಾಗೆ ಅವರಿಬ್ಬರೂ ಮಾತಾಡುತ್ತ ತಮ್ಮ ತಮ್ಮ ಕುದುರೆಗಳ ಮೇಲೆ ಸ್ವಲ್ಪ ದೂರ ಸಾಗಿದರು. ಅವಳು ವೀರವರ್ಮನನ್ನು ಮನಃಪೂರ್ವಕವಾಗಿ ಪ್ರೇಮಿಸು ವಂತೆ ಅವಳ ಮಾತಿನಿಂದ ಗೊತ್ತಾಯಿತು.

ಹಾಗೆಯೇ ಮಾತಾಡುತ್ತ ಅವಳು ತನ್ನ ವಿವಾಹದ ವಿಷಯವನ್ನೂ ಕುರಿತು ಹೇಳಿದಳು. ಅವಳ ತಂದೆ ಅವಳ ವಿವಾಹವನ್ನು ಕುರಿತು ಗಟ್ಟಿಪ್ರಯತ್ನ ಮಾಡುತ್ತಿದ್ದಾರಂತೆ. ಆದರೆ ನಿನ್ನೆಯವರೆಗೂ ತನ್ನ ಮನಸ್ಸನ್ನು ಆಕರ್ಷಿಸುವಂತಹ ವರನು ಯಾವನೂ ಇರಲಿಲ್ಲವಂತೆ. ಇನ್ನು ಅವಳ ತಂದೆ ಸ್ವಯಂವರದ ಏರ್ಪಾಡು ಮಾಡುತ್ತಾರಂತೆ. ಆ ಸ್ವಯಂವರಕ್ಕೆ

ತಪ್ಪದೆ ಬರಬೇಕೆಂದು ವೀರವರ್ಮನಿಗೆ ಹೇಳಿ, "ಇಷ್ಟಕ್ಕೂ ನೀವು ಯಾರೆಂಬುದನ್ನು ಹೇಳಲೇ ಇಲ್ಲವಲ್ಲ ?" ಎಂದಳು.

"ನಾನು ಮಾಳವದ ಯುವರಾಜ. ನನ್ನ ಹೆಸರು ಕಲ್ಯಾಣವರ್ಮ" ಎಂದು ವೀರವರ್ಮ ಅವಳೊಂದಿಗೆ ಸುಳ್ಳು ಹೇಳಿಬಿಟ್ಟನು. ತಾನೊಂದು ಸಾಧಾರಣ ಉದ್ಯೋಗಸ್ಥನ ಮಗನೆನ್ನಲು ಅವನಿಗೆ ಇಷ್ಟವಿಲ್ಲದೆ ಹೋಗಿರಬೇಕು,

"ಒಳ್ಳೆಯದು. ನನ್ನ ಸ್ವಯಂವರಕ್ಕೆ ಬರಲು ಮರೆಯಬೇಡಿರಿ" ಎಂದು ಒತ್ತಿ ಹೇಳಿದಳು ಸ್ವರ್ಣಕೇಶಿ. ಅಷ್ಟರಲ್ಲಿ ಅವಳ ಪರಿವಾರದವರು ಅವಳನ್ನು ಹುಡುಕುತ್ತಾ ಅಲ್ಲಿಗೆ ಬಂದರು. ಅವಳು ವೀರವರ್ಮನಿಗೆ ಮತ್ತೊಮ್ಮೆ ಕೃತಜ್ಞತೆ ಹೇಳಿ ಅವರೊಂದಿಗೆ ಉದಯಪುರದ ಕಡೆಗೆ ಹೊರಟು ಹೋದಳು. ಹೋಗುವಾಗ ಅನೇಕ ಬಾರಿ ತಿರುತಿರುಗಿ ವೀರವರ್ಮನನ್ನು ನೋಡುತ್ತಾ, ಅವನನ್ನು ಬಿಟ್ಟುಹೋಗಲು ಮನಸ್ಸಿಲ್ಲದವಳಂತೆ ಹೋದಳು.

ವೀರವರ್ಮನು ರಾಜಧಾನಿಗೆ ಹೋಗಿ ಕಲ್ಯಾಣವರ್ಮನನ್ನು ಸಂಧಿಸಿ ನಡೆದ ಸಂಗತಿಯನ್ನೆಲ್ಲಾ ಹೇಳಿ, ಸ್ವರ್ಣಕೇಶಿಯೊಂದಿಗೆ ತನ್ನ ಹೆಸರನ್ನು ಕಲ್ಯಾಣವರ್ಮನೆಂದು ಹೇಳಿದ ಸಂಗತಿಯನ್ನೂ ಹೇಳಿದನು.

ಅದನ್ನು ಕೇಳಿ ಕಲ್ಯಾಣವರ್ಮನು ತಲೆದೂಗುತ್ತಾ ಸ್ವಲ್ಪ ಹೊತ್ತು ಏನೂ ಹೇಳದೆ ಯೋಚಿಸಿದನು. ಸ್ವರ್ಣಕೇಶಿಯೂ ತನ್ನ ಮಿತ್ರನೂ ಪರಸ್ಪರ ಪ್ರೇಮಿಸಿಕೊಂಡಿದ್ದಾರೆ. ಅವರ ಪ್ರೇಮವು ಸಫಲವಾಗುವಂತೆ ಮಾಡಬೇಕು, ಎಂದು ನಿಶ್ಚಯಿಸಿಕೊಂಡನು. ನಿಜ ಸಂಗತಿ ಏನೆಂದರೆ, ಕಲ್ಯಾಣವರ್ಮನು ಈ ಮೊದಲೇ ಸ್ವರ್ಣಕೇಶಿಯ ಸೌಂದರ್ಯವನ್ನು ಕುರಿತು ಕೇಳಿದ್ದನು. ಅವಳನ್ನು ಮದುವೆ ಮಾಡಿಕೊಳ್ಳಬೇಕೆಂಬ ಉದ್ದೇಶ ಅವನ ಮನಸ್ಸಿನಲ್ಲಿತ್ತು. ಈ ಸಂಗತಿಯನ್ನು ಅವನು ಯಾರೊಂದಿಗೂ ಬಾಯಿಬಿಟ್ಟಿರಲಿಲ್ಲ. ಈಗ ಸ್ವರ್ಣ



ಕೇಶಿ ತನ್ನ ಮಿತ್ರ ವೀರವರ್ಮನನ್ನು ಪ್ರೇಮಿಸುವುದಾಗಿ ತಿಳಿದ ಮೇಲೆ, ತಾನು ಅವರ ಪ್ರಣಯಕ್ಕೆ ಅಡ್ಡ ನಿಲ್ಲಬಾರದೆಂದು ಗಟ್ಟಿ ಮಾಡಿಕೊಂಡನು.

"ಮಿತ್ರಾ! ನಿನಗೆ ಸ್ವರ್ಣಕೇಶಿಯೊಂದಿಗೆ ವಿವಾಹವಾಗುವ ಹಾಗೆ ನನ್ನಿಂದಾದ ಸಹಾಯವೆಲ್ಲಾ ಮಾಡುತ್ತೇನೆ" ಎಂದು ಕಲ್ಯಾಣವರ್ಮನಿಗೆ ಮಾತು ಕೊಟ್ಟನು.

ರಾಜಕುಮಾರಿ ಸ್ವರ್ಣಕೇಶಿ ತನ್ನ ಮನೆಗೆ ಹೋದ ಕೂಡಲೇ ತನ್ನ ತಂದೆಯೊಂದಿಗೆ ಕಾಡಿನಲ್ಲಿ ತನಗಾದ ಅನುಭವಗಳನ್ನೆಲ್ಲಾ ಹೇಳಿ, ತನ್ನನ್ನು ಕಾಪಾಡಿದ ಮಾಳವದ ಯುವರಾಜ ಕಲ್ಯಾಣವರ್ಮನನ್ನೇ ತಾನು ವಿವಾಹ ಮಾಡಿಕೊಳ್ಳುವೆನೆಂದು ತನ್ನ ನಿಶ್ಚಯವನ್ನು ತಿಳಿಸಿದಳು. ಆ ಮಾತಿಗೆ ತಂದೆ ಸಂತೋಷದಿಂದ ಒಪ್ಪಿಗೆ ಕೊಟ್ಟನು, ಏಕೆಂದರೆ ಸ್ವರ್ಣಕೇಶಿಯನ್ನು ಕಲ್ಯಾಣವರ್ಮನಿಗೆ ಕೊಟ್ಟು ಮದುವೆ ಮಾಡಬೇಕೆಂಬ ಆಲೋಚನೆ ಅವಳ ತಂದೆ ತಾಯಂದಿರಿಗೆ ಎಂದಿನಿಂದಲೋ ಇದ್ದಿತು. ಅವನನ್ನು ಮಗಳು ಒಪ್ಪ



ದಿದ್ದರೆ ಬೇರೆ ಕೆಲ ಮಂದಿ ರಾಜಕುಮಾರರನ್ನು ಆರಿಸಬೇಕೆಂತಲೇ ಸ್ವಯಂವರ ಏರ್ಪಡಿಸಲು ನಿಶ್ಚಯಿಸಿದ್ದನು. ಈಗ ಸ್ವರ್ಣಕೇಶಿಯ ಬಾಯಿಯಿಂದಲೇ ಮಾಳವ ಯುವರಾಜನ ಮಾತು ಬಂದುದರಿಂದ ಅವಳ ತಂದೆಗೆ ದೊಡ್ಡ ಭಾರವಿಳಿದಷ್ಟು ಸಂತೋಷವಾಯಿತು.

"ಮಗಳೇ! ಅನೇಕ ವರ್ಷಗಳ ಹಿಂದೆ ನಾನೂ ಮಾಳವ ರಾಜನೂ ಸಂಧಿಸಿದಾಗ ಮಾತಿನ ವರಸೆಯಲ್ಲಿ ನಮ್ಮ ಮಕ್ಕಳೊಳಗೆ ವಿವಾಹ ಸಂಬಂಧ ಬೆಳೆಸಬೇಕೆಂದು ಮಾತಾಡಿಕೊಂಡಿದ್ದೆವು. ಅದೀಗ ನಿನಗೂ ಸಮ್ಮತವಾಗಿದೆ. ಎರಡು ವರ್ಷಗಳ ಕೆಳಗೆ ಮಾಳವ ರಾಜನು ಕಲ್ಯಾಣವರ್ಮ ಕುಮಾರನ ಚಿತ್ರಪಟವನ್ನು ಬರೆಯಿಸಿ ಕಳುಹಿಸಿದ್ದಾನೆ. ಇನ್ನು ಆ ಚಿತ್ರಪಟವನ್ನು ನಿನ್ನ ಮಂದಿರದಲ್ಲೇ ಇಟ್ಟುಕೊಳ್ಳಬಹುದು" ಎಂದು ಹೇಳಿ ತಂದೆ, ಕಲ್ಯಾಣವರ್ಮನ ಚಿತ್ರಪಟವನ್ನು ಸ್ವರ್ಣಕೇಶಿಗೆ ಕೊಟ್ಟನು. ಆ ಚಿತ್ರವನ್ನು ನೋಡಿ ಸ್ವರ್ಣಕೇಶಿ ಬೆರಗಾದಳು. ಆ ಚಿತ್ರದಲ್ಲಿರುವ ವ್ಯಕ್ತಿ ತನ್ನನ್ನು ಅರಣ್ಯದಲ್ಲಿ ಅಪಾಯದಿಂದ ಕಾಪಾಡಿದವನೇ ಅಲ್ಲ! ಹೊಸಬ!

"ಅಪ್ಪಾ, ಮಾಳವ ರಾಜನಿಗೆ ಇಬ್ಬರು ಕುಮಾರರೇನು ?" ಎಂದು ಕೇಳಿದಳು.

"ಇಲ್ಲಮ್ಮಾ, ಮಾಳವ ರಾಜನಿಗೆ ಒಬ್ಬನೇ ಮಗ, ಕಲ್ಯಾಣವರ್ಮ. ಅವನೇ ಯುವರಾಜ ಕೂಡಾ" ಎಂದನು ತಂದೆ.

"ಮತ್ತೇನಿಲ್ಲಪ್ಪಾ. ನಾನು ಪ್ರತ್ಯಕ್ಷ ನೋಡಿದವನಿಗೂ ಚಿತ್ರದಲ್ಲಿರುವ ರೂಪಕ್ಕೂ ಸ್ವಲ್ಪ ವ್ಯತ್ಯಾಸವಿರುವಂತೆ ಕಂಡಿತು" ಎಂದಳು ಸ್ವರ್ಣಕೇಶಿ.

"ಇರಬಹುದು. ನನಗೂ ಆ ಹುಡುಗನನ್ನು ನೋಡಬೇಕೆಂದಿದೆ. ಅವನನ್ನು ಒಂದು ಸಾರಿ ಇಲ್ಲಿಗೆ ಬರಬೇಕೆಂದು ಆಹ್ವಾನಿಸೋಣ" ಎಂದನು ಸ್ವರ್ಣಕೇಶಿಯ ತಂದೆ.

ತಂದೆಯ ಮಾತು ಕೇಳಿ ಸ್ವರ್ಣಕೇಶಿಗೂ ಸಂತೋಷವೆನಿಸಿತು, ತನ್ನ ಮನಸ್ಸಿನ ಸಂದೇಹವನ್ನು ತೀರಿಸಿಕೊಳ್ಳಲು ಅದೇ ಒಳ್ಳೆಯದು.

ಕೂಡಲೇ ಕಲ್ಯಾಣವರ್ಮನಿಗೆ ಉದಯಗಿರಿ ರಾಜನಿಂದ ಪ್ರೀತಿಯ ಆಹ್ವಾನವು ಹೋಯಿತು. ಅದನ್ನು ನೋಡಿ ಕಲ್ಯಾಣವರ್ಮನು ವೀರವರ್ಮನನ್ನು ಕರೆದು, "ನೀನು ನನ್ನ ಬದಲಿಗೆ ಉದಯಪುರಕ್ಕೆ ಹೋಗಬೇಕು. ಆಹ್ವಾನ ಬಂದಿದೆ. ಸ್ವರ್ಣಕೇಶಿಯ ತಂದೆಯ ಹತ್ತಿರ ನೀನು ಕಲ್ಯಾಣವರ್ಮ ಅಂತ ನನ್ನ ಹೆಸರು ಹೇಳಿಕೊಂಡು ನಟಿಸಲಿಕ್ಕೇನೂ ಅಡ್ಡಿಯಿಲ್ಲ. ಆದರೆ ಸ್ವರ್ಣಕೇಶಿಯ ಹತ್ತಿರ ಮಾತ್ರ ಸತ್ಯಸಂಗತಿಯನ್ನು ಹೇಳಿಬಿಡು. ನೀನು ನನ್ನ ಹೆಸರನ್ನು ಹೇಳುವುದಕ್ಕೆ ಮೊದಲೇ ಅವಳು ನಿನ್ನನ್ನು ಪ್ರೀತಿಸಿರುವುದರಿಂದ ನಿನ್ನ ಪ್ರೇಮ ಸಫಲವೇ ಆಗುತ್ತದೆ. ವಿವಾಹವಾದ ಮೇಲೆ ನಿಜಸಂಗತಿ ತಿಳಿದರೂ ಪರವಾಯಿಲ್ಲ" ಎಂದನು.

ಆದರಂತೆ ವೀರವರ್ಮನು ಯುವರಾಜನ ಲಾಂಛನಗಳೊಂದಿಗೆ ಸ್ವಲ್ಪ ಪರಿವಾರವನ್ನೂ ಕೂಡಿಕೊಂಡು

ಉದಯಪುರಕ್ಕೆ ಹೋಗಿ ರಾಜನನ್ನು ನೋಡಿದನು. ಕಲ್ಯಾಣವರ್ಮನ ಚಿತ್ರಪಟಕ್ಕೂ ಇವನಿಗೂ ವ್ಯತ್ಯಾಸ ವಿರುವುದನ್ನು ರಾಜನೂ ಗಮನಿಸಿದನು. ಆದುದ ರಿಂದಲೇ ಸ್ವರ್ಣಕೇಶಿ ಚಿತ್ರಪಟವನ್ನು ಗುರುತಿಸ ಲಾರದೇ ಹೋದಳು. ತಪ್ಪು ಚಿತ್ರಕಾರನದೇ ಇರ ಬೇಕೆಂದು ಉದಯಪುರದ ರಾಜನು ಅಂದುಕೊಂಡನು.

ತರುವಾಯ ವೀರವರ್ಮನು ಸ್ವರ್ಣಕೇಶಿಯ ಮಂದಿರಕ್ಕೆ ಹೋದನು. ಸ್ವರ್ಣಕೇಶಿ ಅವನೊಂದಿಗೆ, "ನನ್ನ ತಂದೆ ನಿಮ್ಮನ್ನು ನೋಡಬೇಕೆಂದು ಆಶೆಪಟ್ಟು ಕರೆಯಿಸಿಕೊಂಡರು. ನನ್ನ ತಂದೆಯೂ ನಿಮ್ಮ ತಂದೆಯೂ ನಮ್ಮೊಳಗೆ ವಿವಾಹ ಸಂಬಂಧ ಮಾಡ ಬೇಕೆಂದು ಈ ಮೊದಲೇ ಅಂದುಕೊಂಡಿದ್ದಾರಂತೆ. ನನಗೆ ಆ ಸಂಗತಿ ಯಾವುದೂ ಗೊತ್ತಿರಲಿಲ್ಲ. ನಿಮ್ಮ ಸಂಗತಿಯನ್ನು ನಾನು ಹೇಳಿದ ಮೇಲಷ್ಟೇ ತಂದೆ ಅದನ್ನೆಲ್ಲ ಹೇಳಿದರು " ಎಂದಳು.

" ಇನ್ನೇನು ? ನಮ್ಮ ಮದುವೆ ಬೇಗದಲ್ಲೇ ಆಗು ತ್ತದೆಂದು ನನಗೆ ತೋರುತ್ತದೆ. ಅಲ್ಲವೆ?" ಎಂದನು ವೀರವರ್ಮ. ಸ್ವರ್ಣಕೇಶಿ ಎದ್ದು ಹೋಗಿ ಕಲ್ಯಾಣ ವರ್ಮನ ಚಿತ್ರಪಟವನ್ನು ತಂದು ವೀರವರ್ಮನಿಗೆ ತೋರಿಸುತ್ತ, "ಈ ಚಿತ್ರಪಟ ಯಾರದೆಂದು ನಿಮಗೆ ಗೊತ್ತೇ ? " ಎಂದು ಕೇಳಿದಳು.

ಅದನ್ನು ನೋಡಿ ವೀರವರ್ಮ ದಿಗಿಲು ಬಿದ್ದು ಶುಷ್ಕ ಸ್ವರದಿಂದ, " ಇದು ಇಲ್ಲಿಗೆ ಹೇಗೆ ಬಂದಿತು?" ಎಂದು ಕೇಳಿದನು.

" ನನ್ನನ್ನು ಮದುವೆಯಾಗಲು ಬಯಸಿದ ಯಾವ ರಾಜಕುಮಾರನೋ ಇದನ್ನು ನನ್ನ ತಂದೆಗೆ ಕಳುಹಿಸಿ ದ್ದಾನೆ " ಎಂದಳು ಸ್ವರ್ಣಕೇಶಿ.

ವೀರವರ್ಮನು ಅತ್ಯಾವೇಶದಿಂದ " ಏನಿದು ? ಎಂಥ ಮೋಸ! ಕಲ್ಯಾಣವರ್ಮನು ನನಗೆ ಸಹಾಯ ಮಾಡುತ್ತೇನೆಂದು ಮಾತು ಕೊಟ್ಟು ಹೀಗೆ ಬೆನ್ನಿಗೆ ಇರಿಯುವುದೆಂದರೇನು ? ಮಹಾಧೂರ್ತ! " ಎಂದು ಹೇಳಿಬಿಟ್ಟನು.

" ಅವನು ಧೂರ್ತನಲ್ಲ! ಮೋಸಗಾರನೂ ಅಲ್ಲ! ಅದೆಲ್ಲಾ ನೀವೇ! ನನ್ನ ತಂದೆಗೆ ನಿಮ್ಮನ್ನು ಕುರಿತು



ನಿಜಸಂಗತಿ ತಿಳಿಯುವುದಕ್ಕೆ ಮೊದಲೇ ಇಲ್ಲಿಂದ ಹೋಗಿಬಿಡಿರಿ. ಇಲ್ಲದಿದ್ದರೆ ಕಷ್ಟದಲ್ಲಿ ಬೀಳುವಿರಿ!" ಎಂದಳು ಸ್ವರ್ಣಕೇಶಿ.

ವೀರವರ್ಮನು ಧಡಕ್ಕನೆದ್ದು ಯಾರಿಗೂ ಹೇಳದೆ ಹಿಂದಿನ ಬಾಗಿಲಿನಿಂದ ಹೊರಟು ಹೋಗಿಬಿಟ್ಟನು. ಆ ಮೇಲೆ ಬೇಗದಲ್ಲಿ ಕಲ್ಯಾಣವರ್ಮನೊಂದಿಗೆ ಸ್ವರ್ಣ ಕೇಶಿಯ ವಿವಾಹವು ಬಹು ವೈಭವದಿಂದ ನಡೆಯಿತು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಸ್ವರ್ಣಕೇಶಿ ವೀರವರ್ಮನನ್ನು ಮೊದಲು ಮದುವೆ ಯಾಗಲು ಬಯಸಿ, ಆ ಮೇಲೆ ಅವನನ್ನು ಏಕೆ ವಿಸರ್ಜಿಸಿಬಿಟ್ಟಳು ? ಅವನು ರಾಜಕುಮಾರನು ಅಲ್ಲ ವೆಂತಲೇ ? ಅಥವಾ ಚಿತ್ರಪಟದಲ್ಲಿರುವ ಕಲ್ಯಾಣ ವರ್ಮನು ಇನ್ನೂ ಹೆಚ್ಚು ಚೆಲುವನಾಗಿರುವನೆಂತಲೆ? ಈ ಸಂದೇಹಗಳಿಗೆ ತಕ್ಕ ಸಮಾಧಾನ ತಿಳಿದೂ ಹೇಳದೆ ಹೋದರೆ ನಿನ್ನ ತಲೆಯೊಡೆದು ಸಾವಿರ ಹೋಳು ಗಳಾಗುತ್ತದೆ." ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : "ಕಲ್ಯಾಣ ವರ್ಮನು ಊಹಿಸಿಕೊಂಡಂತೆ ಸ್ವರ್ಣಕೇಶಿ ವೀರ ವರ್ಮನನ್ನು ರಾಜಕುಮಾರನೆಂದು ತಿಳಿದ ಮೇಲೆ ಪ್ರೇಮಿಸಲಿಲ್ಲ. ಅದು ತಿಳಿಯುವ ಮೊದಲೇ ಪ್ರೇಮಿಸಿ ಬಿಟ್ಟಿದ್ದಳು. ಆವಳ ಪ್ರೇಮದ ಮೇಲೆ ವಿಶ್ವಾಸವಿದ್ದುದ ರಿಂದಲೇ ಕಲ್ಯಾಣವರ್ಮನು ವೀರವರ್ಮನನ್ನು ತನ್ನ ಸ್ಥಾನದಲ್ಲಿ ಕಳುಹಿಸುತ್ತ, ಅವಳೊಂದಿಗೆ ನಿಜಸಂಗತಿ ಯನ್ನು ಹೇಳಬೇಕೆಂದು ತಿಳಿಸಿದ್ದಾನೆ. ಸ್ವರ್ಣಕೇಶಿ ಕಲ್ಯಾಣವರ್ಮನ ಚಿತ್ರಪಟವನ್ನು ನೋಡಿದ ಕೂಡಲೇ ತಾನು ಅರಣ್ಯದಲ್ಲಿ ನೋಡಿದವನು ರಾಜಕುಮಾರ ಕಲ್ಯಾಣವರ್ಮನಲ್ಲವೆಂಬುದನ್ನು ತಿಳಿದು ಬಿಟ್ಟಳು. ಅವಳು ರಾಜಕುಮಾರನನ್ನೇ ಮದುವೆಯಾಗಲು ನಿಶ್ಚಯಿಸಿದ್ದರೆ ವೀರವರ್ಮನೊಂದಿಗೆ ಮಾತಾಡ ಬೇಕಾದ ಅಗತ್ಯವೇ ಇದ್ದಿರಲಿಲ್ಲ. ಅವನು ತನ್ನ ಪ್ರೇಮಕ್ಕೆ ಪಾತ್ರನು ಹೌದೋ ಅಲ್ಲವೋ ತಿಳಿದು ಕೊಳ್ಳಲು ಪ್ರಯತ್ನಿಸಿ, ತಾನು ನಿಜವಾಗಿ ಯಾರೆಂಬು ದನ್ನು ಹೇಳಲು ಅವನಿಗೆ ಸಂದರ್ಭ ಕೊಟ್ಟಳು. ಆದರೆ ಅವನು ತಾನು ಕಲ್ಯಾಣವರ್ಮ ಅಲ್ಲವೆಂದು ಅವಳೊಂದಿಗೆ ಹೇಳಲೇ ಇಲ್ಲ. ಕಲ್ಯಾಣವರ್ಮನ ಸಲಹೆಯನ್ನು ಕೂಡಾ ಪಾಲಿಸುವ ಇಂಗಿತ ಜ್ಞಾನ ಅವನಿಗಿಲ್ಲ. ಅದೂ ಅಲ್ಲದೆ, ಕಲ್ಯಾಣವರ್ಮನು ತನಗಾಗಿ ಮಾಡಿದ ತ್ಯಾಗವನ್ನು ಕೂಡಾ ಗ್ರಹಿಸಲಿಲ್ಲ. ಅದಕ್ಕೆ ಬದಲಾಗಿ ಅವನು ತನಗೆ ದ್ರೋಹಮಾಡಿದ ನೆಂದು ಆರೋಪಿಸಿದ್ದಾನೆ. ಇಂಥವನನ್ನು ಸ್ವರ್ಣಕೇಶಿ ಮದುವೆ ಮಾಡಿಕೊಳ್ಳುವಳೆಂಬ ಪ್ರಶ್ನೆಗೇ ಎಡೆಯಿಲ್ಲ!"

ರಾಜನಿಗೆ ಹೀಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮತ್ತೆ ಮರದ ಕೊಂಬೆ ಸೇರಿ ನೇತಾಡ ತೊಡಗಿತು.





# ಮೂರು ಸೂಚನೆಗಳು

ಒಂದು ಕಾಲದಲ್ಲಿ ಮಹೇಂದ್ರಪುರವನ್ನು ಮಾರ್ತಾಂಡವರ್ಮನೆಂಬ ರಾಜನು ಪಾಲಿಸುತ್ತಿದ್ದನು. ಅವನ ಮಂತ್ರಿಗಳಲ್ಲಿ ಮಣಿಮಂತನೆಂಬವನು ತುಂಬಾ ಸೂಕ್ಷ್ಮಬುದ್ಧಿಯುಳ್ಳವನೆಂದು ತೋರಿದುದರಿಂದ, ರಾಜನು ಅವನನ್ನು ಪ್ರಧಾನಮಂತ್ರಿಯನ್ನಾಗಿ ಮಾಡಬೇಕೆಂದು ನಿಶ್ಚಯಿಸಿಕೊಂಡನು.

ಆದರೆ ಶುಕ್ರನೆಂಬ ಮತ್ತೊಬ್ಬ ಮಂತ್ರಿ ರಾಣಿಗೆ ಸಮೀಪದ ಬಂಧು. ಆದುದರಿಂದ ರಾಣಿ ರಾಜನೊಂದಿಗೆ, "ನಮ್ಮ ಶುಕ್ರ ನಿಮ್ಮ ಮಣಿಮಂತನಿಗಿಂತ ಯಾವುದರಲ್ಲಿ ಕಡಿಮೆಯಾಗಿದ್ದಾನೆ? ಎಲ್ಲಾ ವಿಷಯದಲ್ಲಿಯೂ ತುಂಬಾ ಬುದ್ಧಿವಂತನಾಗಿದ್ದಾನಲ್ಲ? ನೀವು ಶುಕ್ರನನ್ನೇ ಪ್ರಧಾನಮಂತ್ರಿಮಾಡಿಕೊಳ್ಳಿ, ಅವನೇ ಅದಕ್ಕೆ ತಕ್ಕವನು" ಎಂದು ಹೇಳಿದಳು.

"ಆಗಲಿ ನೋಡೋಣ. ಮಣಿಮಂತನಿಗಿಂತ ಶುಕ್ರನೇ ಬುದ್ಧಿವಂತನೆಂದು ನಿರೂಪಣವಾದರೆ ಹಾಗೆಯೇ ಮಾಡುತ್ತೇನೆ." ಎಂದನು ರಾಜ.

ಈ ಸಂದರ್ಭದಲ್ಲಿ ಒಂದು ಸಮಸ್ಯೆ ರಾಜನ ಆಸ್ಥಾನದವರೆಗೂ ಬಂತು. ಪುರಪ್ರಮುಖನಾದ ಕೋಟೀಶ್ವರನೊಬ್ಬನಿಗೆ ಮದುವೆಯ ಪ್ರಾಯಕ್ಕೆ ಬಂದ ಕುಮಾರಿಯೊಬ್ಬಳಿದ್ದಳು. ಅವಳನ್ನು ಮದುವೆ ಮಾಡಿಕೊಳ್ಳಬೇಕೆಂದು ಮೂವರು ಯುವಕರು ಮುಂದೆ ಬಂದಿದ್ದರು. ಎಲ್ಲಾ ವಿಧದಲ್ಲಿಯೂ ಆ ಮೂವರೂ ಯೋಗ್ಯರಿದ್ದರು. ಅದರ ಮೇಲೆ ಆ ಮೂವರೂ ಒಬ್ಬನೇ ಗುರುವಿನ ಹತ್ತಿರ ವಿದ್ಯಾಭ್ಯಾಸ ಮಾಡಿದವರು. ಮೂವರೂ ಒಂದೇ ವಯಸ್ಸಿನವರು. ಸುಂದರರೂ ಹೌದು.

ಆ ಮೂವರೂ ವರೆಂದಿರ ಹೆಚ್ಚು ಕಡಿಮೆಗಳನ್ನು ನಿರ್ಣಯಿಸಲು ಹುಡುಗಿಯ ತಂದೆಗೆ ಸಾಧ್ಯವಾಗದೆ, ಅವರಿಗೆ ವಿದ್ಯೆ ಕಲಿಸಿದ ಗುರುವಿನ ಹತ್ತಿರ ಹೋಗಿ ಕೇಳಿದನು. ಗುರುಗಳು ಬಾಯಿ ತೆರೆದು ಇಂಥವನು ಹೆಚ್ಚಿನವನೆಂದು ಹೇಳಲಿಲ್ಲ. ಬಾಯಿ ಮುಚ್ಚಿ ತಮ್ಮ ಅಭಿಪ್ರಾಯ ಸೂಚಿಸುವಂತೆ, ಆ ಮೂವರಿಗೂ ಮೂರು ವಸ್ತುಗಳನ್ನು ಕೊಟ್ಟು, "ಈ ವಸ್ತುಗಳಿಂದ ಯಾರು ಹೆಚ್ಚಿನವನೆಂಬುದನ್ನು ನೀವೇ ತಿಳಿದುಕೊಳ್ಳಿ" ಎಂದಷ್ಟೇ ಹೇಳಿದರು. ಆ ವಸ್ತುಗಳು ಯಾವುವೆಂದರೆ, ಮಣ್ಣು, ಬತ್ತ, ನೀರು.

ಈ ಸೂಚನೆಗಳನ್ನು ಹಿಡಿದು ಆ ಯುವಕರಲ್ಲಿ ಯಾವನನ್ನು ಕುಮಾರಿಗೆ ತಕ್ಕವನೆಂದು ಆರಿಸುವುದು?

"ಶೈಲೇಂದ್ರ"

ಮಣ್ಣು ಪಡೆದವನನ್ನೋ? ಬತ್ತ ಪಡೆದವನನ್ನೋ? ನೀರು ಪಡೆದವನನ್ನೋ? ಈ ಸಮಸ್ಯೆಯನ್ನು ಬಗೆ ಹರಿಸಿಕೊಳ್ಳಲಾರದೆ ಕೋಟೀಶ್ವರನು ರಾಜನ ಬಳಿಗೆ ಬಂದು ನಿವೇದಿಸಿಕೊಂಡಿದ್ದನು.

ರಾಜನು ಮೂವರು ಯುವಕರನ್ನೂ ಸಭೆಗೆ ಕರೆಯಿಸಿ, "ನೀವು ಮೂವರೂ ನಿಮ್ಮ ಗುರುಗಳಿಂದ ಪಡೆದ ವಸ್ತುಗಳಲ್ಲಿ ಯಾವುದು ಶ್ರೇಷ್ಠವೆಂಬುದನ್ನು ಹೇಳಿರಿ ನೋಡುವಾ" ಎಂದನು.

ಮಣ್ಣು ಪಡೆದ ಯುವಕನು, "ಪ್ರಭುಗಳೇ, ಎಲ್ಲದಕ್ಕೂ ಕ್ಷೇತ್ರವಾಗಿರುವಂಥಾದ್ದು ಮಣ್ಣು. ಅದು ಇಲ್ಲದಿದ್ದರೆ ಬೀಜವೂ ನೀರೂ ಉಪಯೋಗವಾಗುವುದಿಲ್ಲವಾದುದರಿಂದ ಮಣ್ಣೇ ಶ್ರೇಷ್ಠವಾಗಿದೆ" ಎಂದನು.

ಬತ್ತವನ್ನು ತೆಗೆದುಕೊಂಡ ಯುವಕನು, "ಪ್ರಾಣಿಗಳ ಆಹಾರಕ್ಕೆ ಬೀಜವೇ ಪ್ರಧಾನ. ಬರೀ ಮಣ್ಣಿನಿಂದ ಯಾವುದೂ ಉತ್ಪತ್ತಿಯಾಗುವುದಿಲ್ಲ. ಆದುದರಿಂದ ಗುರುಗಳು ನನಗೆ ಕೊಟ್ಟ ಬತ್ತವೇ ಪ್ರಧಾನವಾಗಿದೆ. ಆಹಾರವೆಂದರೆ ಅನ್ನ, ಅನ್ನಕ್ಕೆ ಮೂಲ ಬತ್ತ." ಎಂದನು.

ನೀರನ್ನು ತೆಗೆದುಕೊಂಡ ಯುವಕನು, "ನೀರು ಇಲ್ಲದೆ ಹೋದರೆ ಕ್ಷೇತ್ರವೂ ಬೀಜವೂ ವ್ಯರ್ಥವಾಗುತ್ತದೆ. ಆದುದರಿಂದ ಗುರುಗಳು ನನಗೆ ಕೊಟ್ಟ ನೀರಿಗಿಂತ ಶ್ರೇಷ್ಠ ಬೇರೆ ಯಾವುದೂ ಇಲ್ಲ." ಎಂದನು.

ಆ ಮೇಲೆ ರಾಜನು ಶುಕ್ರನನ್ನು ನೋಡಿ, "ಈ ಮೂವರು ಯುವಕರಲ್ಲಿ ಯಾರು ಹೆಚ್ಚಿನವರೆಂದು ನಿಮ್ಮ ಅಭಿಪ್ರಾಯ?" ಎಂದು ಕೇಳಿದನು.

"ನೀರೇ ಎಲ್ಲದಕ್ಕಿಂತಲೂ ಮುಖ್ಯ. ಅದನ್ನು ಪಡೆದವನೇ ಶ್ರೇಷ್ಠನೆಂದು ಗುರುವಿನ ಅಭಿಪ್ರಾಯ." ಎಂದು ಶುಕ್ರನು ಮೂರನೇ ಯುವಕನನ್ನೇ ಬಲಪಡಿಸಿದನು.

"ನೀವೇನು ಹೇಳುವಿರಿ?" ಎಂದು ರಾಜನು ಮಣಿಮಂತನನ್ನು ಕೇಳಿದನು.

"ಗುರುಗಳು ಈ ಶಿಷ್ಯರಿಗೆ ಕೊಟ್ಟ ವಸ್ತುಗಳನ್ನು ಪರೀಕ್ಷಿಸದೆ ಏನೂ ಹೇಳಲಾರೆ" ಎಂದನು ಮಣಿಮಂತ. ಮೊದಲು ಮಣಿಮಂತನು ಆ ನೀರನ್ನು ಸ್ವಲ್ಪ ರುಚಿ ನೋಡಿದನು. ಅದು ಉಪ್ಪಾಗಿದ್ದಿತು. ಬತ್ತವನ್ನು ಹಿಚಿಕಿ ಉಮಿಯನ್ನು ಊದಿ ನೋಡಿದನು. ಅದು ಬೇಯಿಸಿದ ಬತ್ತ. ಮೊಳೆತು ಪೈರಾಗುವಂತಹುದಲ್ಲ. ಮಣ್ಣನ್ನು ನೋಡಿ ಹೀಗೆಂದನು: "ಗುರುಗಳು ತನ್ನ ಶಿಷ್ಯರಿಗೆ ಕೊಟ್ಟ ವಸ್ತುಗಳಲ್ಲಿ ಮಣ್ಣು ಮಾತ್ರವೇ ಉತ್ತಮವಾದುದು. ಅದನ್ನು ಪಡೆದವನೇ ಶ್ರೇಷ್ಠನೆಂದು ಗುರುಗಳ ಅಭಿಪ್ರಾಯ. ಇದಕ್ಕೆ ಸಂದೇಹವಿಲ್ಲ."

ಕೋಟೀಶ್ವರನ ಸಮಸ್ಯೆ ತೀರಿತು. ಅದಾದ ಮೇಲೆ ರಾಣಿ ಶುಕ್ರನನ್ನು ಕುರಿತು ಪ್ರಸ್ತಾವಿಸಲಿಲ್ಲ.



# ಎಲ್ಲಾ ನಟನೆ!

ಒಂದು ಊರಿನಲ್ಲಿ ರಾಮಯ್ಯ ಮತ್ತು ಕೃಷ್ಣಪ್ಪ ಎಂಬ ಇಬ್ಬರು ಒಳ್ಳೆಯ ನಟರಾಗಿದ್ದರು.

ಅವರಲ್ಲಿ ರಾಮಯ್ಯನಿಗೆ ದೇವರ ಮೇಲೆ ನಂಬುಗೆ ಇರಲಿಲ್ಲ. ಕೃಷ್ಣಪ್ಪನಿಗೆ ದೇವರ ನಂಬುಗೆ ತುಂಬಾ ಇದ್ದಿತು. ಆದರೆ ದೇವರ ಮೇಲೆ ಭಯವಿಲ್ಲದವನಾಗಿದ್ದನು. ಅಂತೆಯೇ ನೀತಿಯನ್ನೂ ಪ್ರಾಮಾಣಿಕತೆಯನ್ನೂ ಲಕ್ಷಿಸುತ್ತಿರಲಿಲ್ಲ. ರಾಮಯ್ಯನ ಮೇಲೆ ಅವನಿಗೆ ಸ್ವಲ್ಪ ದ್ವೇಷವೂ ಇದ್ದಿತು.

ಹೀಗಿರುವಾಗ ಯಾವುದೋ ಹಬ್ಬದ ಸಮಯದಲ್ಲಿ ಆ ಊರಿನಲ್ಲಿ ಒಂದು ನಾಟಕ ನಡೆಯಿತು. ಅದರಲ್ಲಿ ರಾಮಯ್ಯನಿಗೆ ಪರಮಭಕ್ತನ ವೇಷವಿದ್ದಿತು.

ಕೃಷ್ಣಪ್ಪನು ನೀತಿವಂತನಾದ ಒಬ್ಬ ಪೌರನ ವೇಷದಲ್ಲಿ ನಟಿಸಿದನು. ಇಬ್ಬರ ನಟನೆಯೂ ಸಭಿಕರೆಲ್ಲ ಮೆಚ್ಚುವಂತೆ ಒಳ್ಳೆಯದಾಗಿತ್ತು.

ಮರುದಿನ ಗ್ರಾಮದ ಕಟ್ಟೆಯ ಹತ್ತಿರ ರಾಮಯ್ಯ ಜನರೊಂದಿಗೆ ಆ ನಾಟಕವನ್ನು ಕುರಿತು ಮಾತಾಡುತ್ತ, "ನಿಜ ನೋಡಿದರೆ, ದೇವರೂ ಇಲ್ಲ, ದಿಂಡರೂ ಇಲ್ಲ. ಎಲ್ಲಾ ಸುಳ್ಳೇ!" ಎಂದನು.

ಅಲ್ಲೇ ಇದ್ದ ಕೃಷ್ಣಪ್ಪ ಸಿಟ್ಟಿನಿಂದ, "ದೇವರನ್ನು ನಂಬದ ಮೇಲೆ ಭಕ್ತನ ವೇಷ ಹೇಗೆ ಹಾಕಿದೆ?" ಎಂದು ರಾಮಯ್ಯನನ್ನು ಕೇಳಿದನು.

"ಹೌದಲ್ಲ!" ಎಂದು ಎಲ್ಲರೂ ನಕ್ಕರು.

ಆಗ ರಾಮಯ್ಯ, "ಅದಕ್ಕೇನು ಕೃಷ್ಣಪ್ಪಾ? ಎಲ್ಲಾ ನಟನೆ ತಾನೇ? ನೀನು ದೊಡ್ಡ ನೀತಿವಂತನ ಹಾಗೆ ವೇಷ ಹಾಕಿ ನಟಿಸಲಿಲ್ಲವೇ?" ಎಂದನು.

ಈ ಸಾರಿ ಎಲ್ಲರೂ ಕೃಷ್ಣಪ್ಪನನ್ನು ನೋಡಿ ನಕ್ಕರು.



# ಎಲ್ಲಾ ನಟನೆ!

**ಒಂ**ದು ಊರಿನಲ್ಲಿ ರಾಮಯ್ಯ ಮತ್ತು ಕೃಷ್ಣಪ್ಪ ಎಂಬ ಇಬ್ಬರು ಒಳ್ಳೆಯ ನಟರಾಗಿದ್ದರು.

ಅವರಲ್ಲಿ ರಾಮಯ್ಯನಿಗೆ ದೇವರ ಮೇಲೆ ನಂಬುಗೆ ಇರಲಿಲ್ಲ. ಕೃಷ್ಣಪ್ಪನಿಗೆ ದೇವರ ನಂಬುಗೆ ತುಂಬಾ ಇದ್ದಿತು. ಆದರೆ ದೇವರ ಮೇಲೆ ಭಯವಿಲ್ಲದವನಾಗಿದ್ದನು. ಅಂತೆಯೇ ನೀತಿಯನ್ನೂ ಪ್ರಾಮಾಣಿಕತೆಯನ್ನೂ ಲಕ್ಷಿಸುತ್ತಿರಲಿಲ್ಲ. ರಾಮಯ್ಯನ ಮೇಲೆ ಅವನಿಗೆ ಸ್ವಲ್ಪ ದ್ವೇಷವೂ ಇದ್ದಿತು.

ಹೀಗಿರುವಾಗ ಯಾವುದೋ ಹಬ್ಬದ ಸಮಯದಲ್ಲಿ ಆ ಊರಿನಲ್ಲಿ ಒಂದು ನಾಟಕ ನಡೆಯಿತು. ಆದರಲ್ಲಿ ರಾಮಯ್ಯನಿಗೆ ಪರಮಭಕ್ತನ ವೇಷವಿದ್ದಿತು.

ಕೃಷ್ಣಪ್ಪನು ನೀತಿವಂತನಾದ ಒಬ್ಬ ಪೌರನ ವೇಷದಲ್ಲಿ ನಟಿಸಿದನು. ಇಬ್ಬರ ನಟನೆಯೂ ಸಭಿಕರೆಲ್ಲ ಮೆಚ್ಚುವಂತೆ ಒಳ್ಳೆಯದಾಗಿತ್ತು.

ಮರುದಿನ ಗ್ರಾಮದ ಕಟ್ಟೆಯ ಹತ್ತಿರ ರಾಮಯ್ಯ ಜನರೊಂದಿಗೆ ಆ ನಾಟಕವನ್ನು ಕುರಿತು ಮಾತಾಡುತ್ತ, "ನಿಜ ನೋಡಿದರೆ, ದೇವರೂ ಇಲ್ಲ, ದಿಂಡರೂ ಇಲ್ಲ. ಎಲ್ಲಾ ಸುಳ್ಳೇ!" ಎಂದನು.

ಅಲ್ಲೇ ಇದ್ದ ಕೃಷ್ಣಪ್ಪಸಿಟ್ಟಿನಿಂದ, "ದೇವರನ್ನು ನಂಬದ ಮೇಲೆ ಭಕ್ತನ ವೇಷ ಹೇಗೆ ಹಾಕಿದೆ?" ಎಂದು ರಾಮಯ್ಯನನ್ನು ಕೇಳಿದನು.

"ಹೌದಲ್ಲ!" ಎಂದು ಎಲ್ಲರೂ ನಕ್ಕರು.

ಆಗ ರಾಮಯ್ಯ, "ಅದಕ್ಕೇನು ಕೃಷ್ಣಪ್ಪಾ? ಎಲ್ಲಾ ನಟನೆ ತಾನೇ? ನೀನು ದೊಡ್ಡ ನೀತಿವಂತನ ಹಾಗೆ ವೇಷ ಹಾಕಿ ನಟಿಸಲಿಲ್ಲವೇ?" ಎಂದನು.

ಈ ಸಾರಿ ಎಲ್ಲರೂ ಕೃಷ್ಣಪ್ಪನನ್ನು ನೋಡಿ ನಕ್ಕರು.





# ಅಜೇಯ

ಚಿರಂಜೀವಿ ಎಂಬ ಜ್ಞಾನಿ ದೇಶಸಂಚಾರಮಾಡುತ್ತ ಚಂದ್ರಸೇನ ಮಹಾರಾಜನ ಆಸ್ಥಾನಕ್ಕೆ ಬಂದನು. ಆ ಸಮಯದಲ್ಲಿ ದೊಡ್ಡ ಸಭೆ ಸೇರಿದ್ದಿತು. ರಾಜನು ಒಂದು ಪ್ರಶ್ನೆ ಕೇಳಿದ್ದನು. ಏನು ಪ್ರಶ್ನೆ ಎಂದರೆ; "ಈ ಪ್ರಪಂಚದಲ್ಲಿ ಎಲ್ಲಕ್ಕಿಂತೂ ಹೆಚ್ಚು ಕಷ್ಟಸಾಧ್ಯವಾದ ಕೆಲಸ ಯಾವುದು?"

ಒಬ್ಬೊಬ್ಬರೇ ಎದ್ದು ನಿಂತು ತಮಗೆ ತೋರಿದ ಉತ್ತರಗಳನ್ನು ಹೇಳುತ್ತಿದ್ದರು. ಸ್ವರ್ಗಕ್ಕೆ ಹೋಗುವ ಹಾಗೆ ನಡೆಯುವುದು, ಅಮೃತವನ್ನು ಸಾಧಿಸುವುದು, ದೇವರನ್ನು ನೋಡುವುದು ಎಂದೀ ರೀತಿಯಲ್ಲಿ ತಮಗೆ ತೋರಿದಂತೆ ಒಬ್ಬೊಬ್ಬರು ಒಂದೊಂದು ವಿಧವಾಗಿ ಉತ್ತರ ಕೊಟ್ಟರು.

ಯಾರ ಉತ್ತರವೂ ರಾಜನನ್ನು ತೃಪ್ತಿಗೊಳಿಸಲಿಲ್ಲ. ಕಡೆಗೆ ರಾಜನು ಬೇಸರಪಟ್ಟು, "ಸ್ವರ್ಗ, ನರಕ, ಅಮೃತ, ದೇವರು ಮುಂತಾದುವುಗಳೊಂದನ್ನೂ ನಾವಾರೂ ನೋಡಿರುವುದಿಲ್ಲ. ಅವೆಲ್ಲಾ ಎಲ್ಲೋ ಇವೆಯೆಂದು ಕೆಲವರು ಹೇಳುತ್ತಾರೆ. ಯಾರಾದರೂ ಅವುಗಳನ್ನು ನೋಡಿದ್ದಾರೋ ಎಂದರೆ ಇಲ್ಲವೆನ್ನುತ್ತಾರೆ. ಇರುವುದು ನಿಜವೆಂದೂ, ರುಜುವಾಡಲು ಸಾಧ್ಯವಿಲ್ಲವೆಂದೂ ಹೇಳುತ್ತಾರೆ. ನಾವಾರೂ ಅದಾವುದನ್ನೂ ಕಂಡವರಲ್ಲ. ಉಂಟೆಂದೂ ಇಲ್ಲವೆಂದೂ ಹೇಳುವ ಸಮಸ್ಯೆಯ ವಿಷಯ ಈಗ ಇಲ್ಲಿ ಬೇಡ. ನಮಗೆ ತಿಳಿದಿದ್ದೂ ಮಾಡಲು ಕಷ್ಟವಾದ ಕೆಲಸವನ್ನು ಕುರಿತೇ ಹೇಳಿರಿ" ಎಂದನು.

ಮತ್ತೆ ಒಬ್ಬೊಬ್ಬರೇ ಪ್ರತ್ಯುತ್ತರ ಕೊಡಲು ಶುರು ಮಾಡಿದರು. ಸತ್ಯ ಹೇಳುವುದು ಕಷ್ಟವೆಂದು ಒಬ್ಬನೆಂದರೆ, ಏಕಪತ್ನೀ ವ್ರತವು ಕಷ್ಟವೆಂದು ಇನ್ನೊಬ್ಬನೆಂದನು. ಮಹಾದಾತನೆನಿಸುವುದು ಬಹು ಕಷ್ಟವೆಂದು ಮತ್ತೊಬ್ಬನೂ, ಹಸಿವೆಯನ್ನು ತಡೆಯುವುದು ಅಸಾಧ್ಯವೆಂದು ಬೇರೊಬ್ಬನೂ ಹೀಗೆ ಒಬ್ಬೊಬ್ಬರು ತಮಗೆ ತೋರಿದಂತೆ ಹೇಳಿದರು.

ರಾಜನಿಗೆ ಅದಾವುದೂ ತೃಪ್ತಿಯನ್ನು ನೀಡಲಿಲ್ಲ. ಆಗ ಚಿರಂಜೀವಿ ಎದ್ದು, ತನ್ನ ಪರಿಚಯವನ್ನು ರಾಜನಿಗೆ ಹೇಳಿ, "ತಮ್ಮ ಪ್ರಶ್ನೆಗೆ ನನಗೆ ತೋರುವ ಉತ್ತರವನ್ನೂ ಹೇಳುತ್ತೇನೆ. ಎಲ್ಲಕ್ಕಿಂತಲೂ ಕೋರಿಕೆಗಳನ್ನು ಜಯಿಸುವುದು ಹೆಚ್ಚು ಕಷ್ಟವೆಂದು ನನ್ನ ಬುದ್ಧಿಗೆ ತೋರುತ್ತದೆ." ಎಂದನು. "ಹೇಗೆಂದು ವಿವರಿಸಬಲ್ಲಿರಾ?" ಎಂದು ರಾಜನು ಕೇಳಿದನು.

"ಹರಿಶ್ಚಂದ್ರನು ಸತ್ಯವನ್ನೇ ಹೇಳಿದನು. ರಾಮನು ಏಕಪತ್ನೀ ವ್ರತವನ್ನು ಪಾಲಿಸಿದನು. ಶಿಬಿ, ದಧೀಚಿ, ಕರ್ಣ ಇವರೆಲ್ಲ ಮಹಾದಾತರು. ಆದರೆ ಅವೆಲ್ಲ ಅವರ ಕೋರಿಕೆಗೆ ಅನುಗುಣವಾದುದರಿಂದ ಆ ರೀತಿಯಾಗಿರಲು ಅವರಿಂದ ಸಾಧ್ಯವಾಯಿತು. ಈ ಪ್ರಪಂಚಕ್ಕೆ ಮೂಲವಾದುದೇ ಕೋರಿಕೆ. ಮಹಾತ್ಮರೇ ಆಗಲಿ, ಪಾಪಾತ್ಮರೇ ಆಗಲಿ ಕೋರಿಕೆಗೆ ದಾಸರಾಗಿದ್ದವರೇ. ಪುಣ್ಯಾತ್ಮರದು ಒಳ್ಳೆಯ ಕೋರಿಕೆಯಾದರೆ ಪಾಪಾತ್ಮರದು ಕೆಟ್ಟ ಕೋರಿಕೆ ಎಂಬುದೇ ವ್ಯತ್ಯಾಸ" ಎಂದನು ಚಿರಂಜೀವಿ.

ರಾಜನು ಚಿರಂಜೀವಿಯ ವಾದವನ್ನು ಮೆಚ್ಚಿ ಅವನಿಗೆ ಕಾಣಿಕೆಗಳನ್ನು ಕೊಟ್ಟು ಸತ್ಕರಿಸಿದನು.

ಆ ಸಭೆಯಲ್ಲಿದ್ದ ದುರ್ಜಯನೆಂಬವನಿಗೆ, ಚಿರಂಜೀವಿಗೆ ರಾಜನು ಮಾಡಿದ ಸತ್ಕಾರಗಳು ರುಚಿಸಲಿಲ್ಲ. ಯಾವನೋ ಒಬ್ಬ ಪರದೇಶಿಗೆ ಆಸ್ಥಾನದಪಂಡಿತರ ಮುಖಭಂಗವಾಗುವಂತೆ ಬಹುಮಾನಿಸುವುದೆಂದರೇನು? ಇದಕ್ಕೇನಾದರೂ ಮಾಡಬೇಕೆಂದುಕೊಂಡು ಅವನು ಎದ್ದು ನಿಂತು, "ಪ್ರಭುಗಳೇ, ಕೋರಿಕೆಗಳನ್ನು ಜಯಿಸುವುದು ಅಷ್ಟೇನೂ ಕಷ್ಟವಿಲ್ಲ. ಹಾಗೆ ಜಯಿಸಿದ ಮನುಷ್ಯನೊಬ್ಬ ಸಮೀಪದ ಅರಣ್ಯದಲ್ಲಿದ್ದಾನೆ. ಅಪ್ಪಣೆಯಾದರೆ ಅವನಿಂದ ನಿರೂಪಿಸುತ್ತೇನೆ" ಎಂದನು.

"ಹಾಗೆ ನಿರೂಪಿಸಿದರೆ ಒಳ್ಳೆಯ ಬಹುಮಾನವಿದೆ. ತಪ್ಪಿದ ಪಕ್ಷದಲ್ಲಿ ಕಾರಾಗೃಹ ಪ್ರಾಪ್ತಿ ಎಂಬುದೂ ನೆನಪಿರಲಿ!" ಎಂದನು ಚಂದ್ರಸೇನರಾಜ.

ದುರ್ಜಯನು ತನ್ನ ಪರಿಚಯದ ಒಬ್ಬ ಮನುಷ್ಯನಿಗೆ ಋಷಿಯ ವೇಷವನ್ನು ಹಾಕಿ, ಹೇಗೆ ನಡೆದುಕೊಳ್ಳಬೇಕೆಂಬುದನ್ನೆಲ್ಲಾ ಹೇಳಿ, ಎರಡು ದಿನಗಳ ನಂತರ ಅವನನ್ನು ರಾಜನ ಸಭೆಗೆ ಕರೆದುಕೊಂಡು ಬಂದನು. ಆ ಕಳ್ಳ ಋಷಿಯನ್ನು ರಾಜನಿಗೆ ತೋರಿಸಿ, "ಇವರೇ ನಾನು ಹೇಳಿದವರು" ಎಂದನು ದುರ್ಜಯ.



ಆ ಋಷಿಗೆ ಕೋರಿಕೆಗಳಿವೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸುವಂತೆ ರಾಜನು ಚಿರಂಜೀವಿಗೆ ಹೇಳಿದನು. ಚಿರಂಜೀವಿ ಆತನಿಗೆ ಎಷ್ಟೋ ಆಸೆಗಳನ್ನು ತೋರಿಸಿದನು. ಕಳ್ಳ ಋಷಿ ಅದಾವುದಕ್ಕೂ ಬಾಗಲಿಲ್ಲ. ಆ ಮನುಷ್ಯನಿಗೆ ಯಾವ ಕೋರಿಕೆಯೂ ಇಲ್ಲದಂತೆ ತೋರಿತು. ಚಂದ್ರಸೇನನು ಕಡೆಗೆ ಬೇಸತ್ತು, "ಈ ರಾಜ್ಯವನ್ನೇ ಈತನಿಗೆ ಕೊಟ್ಟು ಬಿಡುತ್ತೇನೆ. ಸ್ವೀಕರಿಸುವಿರಾ ಋಷಿಗಳೇ?" ಎಂದು ಕೇಳಿದನು.

"ನಾನು ಸರ್ವಸಂಗಪರಿತ್ಯಾಗಿ. ನನಗೆ ರಾಜ್ಯವೇಕೆ? ಸಂಪತ್ತುಗಳೇಕೆ?" ಎಂದ ಕಳ್ಳ ಋಷಿ.

ಚಿರಂಜೀವಿ ಏನೋ ಆಲೋಚನೆ ಮಾಡಿ, "ಮಹಾನುಭಾವರೇ! ನಿಮ್ಮಂಥವರು ಅಪೂರ್ವ. ಆದರೂ ನಾಳೆ ಬೇಡ, ನಾಡದು ಮತ್ತೆ ಸಭೆಗೆ ಬಂದರೆ ನಿಮಗೂ ಕೋರಿಕೆಗಳು ಇವೆ ಎಂಬುದನ್ನು ನಿರೂಪಿಸಿ ತೋರಿಸಬಲ್ಲೆ. ನೀವು ಬಾರದೇ ಹೋದ

ಪಕ್ಷದಲ್ಲಿ ನಿಮಗೂ ಕೋರಿಕೆಗಳು ಇರುವುದೆಂದೇ ನಂಬಿಸಲ್ಪಡುತ್ತದೆ" ಎಂದನು.

ಚಿರಂಜೀವಿಯ ಉದ್ದೇಶವು ಏನೆಂಬುದು ಯಾರಿಗೂ ಅರ್ಥವಾಗಲಿಲ್ಲ. ಬಹಿರಂಗವಾಗಿ ಎಲ್ಲರ ಇದಿರಿನಲ್ಲಿ ಕೋರಿಕೆಗಳೇನೂ ಇಲ್ಲದವನಂತೆ ನಟಿಸುವ ಆ ಋಷಿ, ಮರೆಯಲ್ಲಿಯಾದರೂ ತನ್ನ ಕೋರಿಕೆಯನ್ನು ಬಯಲು ಮಾಡದಿರಲಾರನೆಂದು ಚಿರಂಜೀವಿ ಅಂದುಕೊಂಡಿರ ಬೇಕೆನಿಸಿತು ಎಲ್ಲರಿಗೂ. ಕಳ್ಳ ಋಷಿ ಕೂಡಾ ಹಾಗೆಯೇ ಅಂದುಕೊಂಡನು. ತಾನು ಇರುವ ಸ್ಥಳಕ್ಕೆ ಯಾರು ಬಂದರೂ ಚಿರಂಜೀವಿಯೇ ಅವರನ್ನು ಕಳುಹಿಸಿರ ಬೇಕೆಂದುಕೊಂಡು ಬಹಳ ಜಾಗರೂಕತೆಯಿಂದಿದ್ದನು.

ಮೊದಲನೇ ದಿನ ಯಾವ ವಿಶೇಷವೂ ನಡೆಯ ಲಿಲ್ಲ. ಎರಡನೇ ದಿನ ದುರ್ಜಯನು ಕಳ್ಳ ಋಷಿ ಯನ್ನು ಕರೆದುಕೊಂಡು ರಾಜನ ಮಹಾಸಭೆಗೆ ಬಂದನು. ಚಿರಂಜೀವಿ ಋಷಿಯನ್ನು ನೋಡಿದ ಕೂಡಲೇ, "ತಮಗೆ ಕೋರಿಕೆಗಳು ಇರುವುದೆಂದು ನಿರೂಪಿಸುತ್ತೇನೆಂದು ನಾನು ಹೇಳಿದ್ದೆನಷ್ಟೆ? ನೀವೀಗ ಏಕೆ ಬಂದಿರಿ?" ಎಂದು ಕೇಳಿದನು.

ಕಳ್ಳ ಋಷಿ ಮುಗುಳು ನಗುತ್ತ, "ಅದು ಹೇಗೆ ನಿರೂಪಿಸುವಿರೋ ನೋಡೋಣವೆಂದು ಬಂದೆನು." ಎಂದನು. ಕೂಡಲೇ ಚಿರಂಜೀವಿ, "ಇದೇ ನೋಡಿ ನಿಮಗಿರುವ ಕೋರಿಕೆ!" ಎಂದನು.

ಸಭೆಯಿಡೀ ಹರ್ಷಧ್ವಾನಗಳಿಂದ ತುಂಬಿತು. ಆ ಸದ್ದು ಅಡಗಿದ ಮೇಲೆ ಚಿರಂಜೀವಿ ಕಳ್ಳ ಋಷಿ ಯನ್ನು ನೋಡಿ, "ಸ್ವಾಮಿ, ನಿಮಗೆ ಕೋರಿಕೆ ಯೇನಿಲ್ಲವೆಂದರೇನು ಹೇಳಿ? ನೀವು ಕೋರಿಕೆ ಗಳೇನೂ ಇಲ್ಲದವರೆಂಬುದನ್ನು ನಿರೂಪಿಸಲು ದುರ್ಜಯನು ಕರೆದಕೂಡಲೇ ಇಲ್ಲಿಗೆ ಬರಲಿಲ್ಲವೆ? ಇನ್ನೊಂದು ದಿನ ತಡೆದುಕೊಳ್ಳಿರೆಂದರೂ ತಡೆದು ಅದೇ ನೆನಪಿನಲ್ಲಿರಲಿಲ್ಲವೆ? ನಿಮಗೆ ಯಾವ ಕೋರಿಕೆ ಗಳೂ ಇಲ್ಲವೆಂಬುದನ್ನು ರಾಜಸಭೆಯಲ್ಲಿ ನಿರೂಪಿಸಿ ಹೆಸರುಪಡೆಯಬೇಕೆಂದಿದ್ದುದರಿಂದಲೇ ಬಂದಿದ್ದೀರಿ. ಈಗಲೂ ಬಂದಿರಿ." ಎಂದನು.

ಚಂದ್ರಸೇನರಾಜನು ದುರ್ಜಯನ ಕಡೆಗೆ ನೋಡಿ, "ನೀನು ಸೋತಿರುವಿ. ನೀನು ಕಾರಾಗೃಹ ಶಿಕ್ಷೆ ಅನುಭವಿಸಬೇಕು." ಎಂದನು. ಆಗ ಚಿರಂಜೀವಿ ರಾಜನನ್ನು ನೋಡಿ, "ಪ್ರಭು! ಇದರಲ್ಲಿ ದುರ್ಜಯನ ತಪ್ಪೇನೂ ಇಲ್ಲವಲ್ಲಾ? ಕೋರಿಕೆಗಳನ್ನು ಜಯಿಸು ವುದು ಅಸಾಧ್ಯವೆಂದು ಈಗ ತಾನೇ ನಿರೂಪಣ ವಾಯಿತು? ನಾನು ಹೇಳಿದುದು ತಪ್ಪೆಂದು ನಿರೂಪಿಸ ಬೇಕೆಂಬ ಕೋರಿಕೆಯಿಂದ ಆತನು ಹೀಗೆ ಮಾಡಿದ. ಇದು ಮನ್ನಿಸಲು ತಕ್ಕುದಾದ ಮಾನವರ ಸಹಜ ಸ್ವಭಾವ" ಎಂದನು. ಹಾಗೆಯೇ ಚಂದ್ರಸೇನನು ದುರ್ಜಯನನ್ನು ಮನ್ನಿಸಿದನು.






# ದುರ್ವಾಸ

ದುರ್ವಾಸನೆಂದರೆ ವಾಸಸ್ಥಳವಿಲ್ಲದವನೆಂದು ಅರ್ಥ ಈ ಮಹಾಮುನಿ ಮನೆಬಾಗಿಲು ಇಲ್ಲದವನಾಗಿಯೇ ಕಾಣುತ್ತಾನೆ. ಇಷ್ಟ ಬಂದಲ್ಲಿ ಸ್ವಲ್ಪ ದಿನವಿದ್ದು ಮತ್ತೆಲ್ಲಿಗೋ ಹೋಗಿಬಿಡುತ್ತಾನೆ.

ಇವನು ಅತ್ರಿ ಮುನಿಯ ಪತ್ನಿ ಅನಸೂಯೆಯಲ್ಲಿ ಶಿವನ ಅಂಶದಿಂದ ಜನಿಸಿದವನು. ಆ ದಂಪತಿಗಳಿಗೆ ತ್ರಿಮೂರ್ತಿಗಳ ಅಂಶದಿಂದಲೂ ಕುಮಾರರು ಹುಟ್ಟಿದರು. ಬ್ರಹ್ಮನ ಅಂಶದಿಂದ ಹುಟ್ಟಿದವನು ಚಂದ್ರ. ವಿಷ್ಣುವಿನ ಅಂಶದಿಂದ ದತ್ತಾತ್ರೇಯನು ಹುಟ್ಟಿದನು.

ಶಿವನು ತ್ರಿಪುರಾಸುರರನ್ನು ಕೊಂದು ವಿಜಯ ಶಾಲಿಯಾಗಿ ಹಿಂದಿರುಗುತ್ತಿದ್ದಾಗ, ಅವನ ಕೈಯಲ್ಲಿದ್ದ ಬಾಣವು ಬಾಲಕನ ರೂಪದಲ್ಲಿ ಕಾಣಿಸಿತು. ಅದನ್ನು ನೋಡಿ ದೇವತೆಗಳು, "ಈ ಹಸುಳೆ ಯಾರು ?" ಎಂದು ಕೇಳಿದರು.

"ಇವನ ಹೆಸರು ದುರ್ವಾಸ!" ಎಂದು ಹೇಳಿ ಶಿವನು ಆ ಮಗುವನ್ನು ಅತ್ರ್ಯಾಶ್ರಮದ ಬಳಿಯಲ್ಲಿ ಕೆಳಗೆ ಹಾಕಿದನಂತೆ. ಆಗ ಮಾಯವಾದ ಮಗು ಅನುಸೂಯೆಯ ಮಗನಾಗಿ ಹುಟ್ಟಿತು.

ಗಂಧಮಾಧನ ಪರ್ವತದ ಹತ್ತಿರ ದುರ್ವಾಸನು ತಪಸ್ಸು ಮಾಡಿಕೊಂಡಿದ್ದಾಗ ಒಂದು ಶೃಂಗಾರ ದೃಶ್ಯವು ಅವನ ಮನಸ್ಸನ್ನು ಸೆಳೆಯಿತು. ಸಾಹಸಿಕನೆಂಬ ಗಂಧರ್ವನು ತಿಲೋತ್ತಮೆಯೆಂಬ ಅಪ್ಸರಸಿಯೊಂದಿಗೆ ಪ್ರಣಯ ವಿಹಾರ ಮಾಡುವುದನ್ನು ಸ್ವಲ್ಪ ಹೊತ್ತು ನೋಡಿದನು. ಆಗ ಅವನಿಗೆ ತಾನು ಕೂಡಾ ಒಬ್ಬಳನ್ನು ಮದುವೆಯಾಗಿ ಸಂಸಾರ ಸುಖವನ್ನು ಸವಿಯಬೇಕೆಂದು ತೋರಿತು. ತಪಸ್ಸನ್ನು ಬಿಟ್ಟು ಕನ್ಯಾನ್ವೇಷಣೆಗೆ ತೊಡಗಿದನು. ಆಗ ಔರ್ವನೆಂಬವನು ತನ್ನ ಮಗಳಾದ ಕಂದಳಿ ಎಂಬವಳನ್ನು ದುರ್ವಾಸನಿಗೆ ಕೊಡಲು ಒಪ್ಪಿದನು. ಮದುವೆಯೂ ಆಯಿತು.

ದುರ್ವಾಸನು ಕಂದಳಿಯೊಂದಿಗೆ ಸ್ವಲ್ಪ ಕಾಲ ಮಾತ್ರ ಸಂಸಾರ ಸಾಗಿಸಿದನು. ಕೋಪ ಸ್ವಭಾವದವನಾದ ದುರ್ವಾಸನ ಹಾಗೆಯೇ ಕಂದಳಿಯೂ ಕೋಪ ಗುಣದವಳಾದುದರಿಂದ ಸುಖವು ಶೂನ್ಯವಾಯಿತು. ದುರ್ವಾಸನು ಹೆಂಡತಿಯನ್ನು ಬಿಟ್ಟು ತಪಸ್ಸು ಮಾಡಲು ಹೊರಟುಹೋದನು.

ಈ ತಿರುಗಾಟದ ತಪಸ್ವಿ ದುರ್ವಾಸನಿಂದಲೇ ಪಾಂಡವರು ಅಷ್ಟು ಪ್ರಸಿದ್ಧರಾಗಲು ಕಾರಣ

ವಾಯಿತು. ದುರ್ವಾಸನು ಒಮ್ಮೆ ಕುಂತಿ ಭೋಜನ ಮನೆಗೆ ಹೋಗಿ, ಕನ್ನೆಯಾಗಿದ್ದ ಕುಂತಿ ಮಾಡಿದ ಸಪರ್ಯೆಗಳಿಗೆ ಮೆಚ್ಚಿ ಅವಳಿಗೆ ದೇವತೆಗಳ ಮಂತ್ರಗಳನ್ನು ಉಪದೇಶಿಸಿದನು. ಕುತೂಹಲದಿಂದ ಕುಂತಿ ಸೂರ್ಯಮಂತ್ರವನ್ನು ಜಪಿಸಿ ಕರ್ಣನನ್ನು ಹಡೆದು ಯಾರಿಗೂ ತಿಳಿಯದಂತೆ ನದಿಯಲ್ಲಿ ಬಿಟ್ಟುಬಿಟ್ಟಳು. ಆ ಮೇಲೆ ಮದುವೆಯಾಗಿ ಗಂಡನ ಅನುಮತಿಯಿಂದ, ಯಮ, ವಾಯು, ಇಂದ್ರನ ಮಂತ್ರಗಳಿಂದ, ಧರ್ಮರಾಜ, ಭೀಮ, ಅರ್ಜುನರನ್ನು ಪಡೆದು, ಉಳಿದ ಮಂತ್ರವನ್ನು ಮಾದ್ರಿಗೆ ಕೊಟ್ಟು ನಕುಲ ಸಹದೇವರ ಜನ್ಮಕ್ಕೆ ಕಾರಣಳಾದಳು. ಈ ವಿಧವಾಗಿ ದುರ್ವಾಸನು ಮಹಾಭಾರತ ಕಥೆಗೆ ಮೂಲಕಾರಕನಾದನು.

ಕೌರವರು ಪಾಂಡವರ ಮೇಲೆ ಹಗೆ ತೀರಿಸಲು ಈ ದುರ್ವಾಸನ ಸಹಾಯ ಕೇಳಲು ಅದಕ್ಕೂ ಒಪ್ಪಿದನು. ಪಾಂಡವರು ಅರಣ್ಯವಾಸದಲ್ಲಿರುವಾಗ, ದುರ್ವಾಸನು ನೂರು ಮಂದಿ ಬ್ರಾಹ್ಮಣರನ್ನು ಕರೆದುಕೊಂಡು ಪಾಂಡವರ ಬಳಿಗೆ ಬಂದು ಭೋಜನ ಕೇಳಿದನು. ಧರ್ಮರಾಜನು ಅವರೆಲ್ಲರಿಗೂ ಭೋಜನ ಬಡಿಸುವಂತೆ ದ್ರೌಪದಿಗೆ ಹೇಳಿದನು. ದ್ರೌಪದಿಯ ಬಳಿಯಲ್ಲಿದ್ದ ಅಕ್ಷಯಪಾತ್ರೆಯಲ್ಲಿ ಆ ದಿನದ ಕಾರ್ಯ ಮುಗಿದಿತ್ತು. ಪಾತ್ರವನ್ನೂ ತೊಳೆದಾಗಿತ್ತು. ದ್ರೌಪದಿ ಅಷ್ಟು ಮಂದಿ ಬ್ರಾಹ್ಮಣರ ಹಸಿವೆಯನ್ನು ನೀಗಿಸುವುದು ಹೇಗೆಂದು ಚಿಂತಿಸುವಾಗ, ಕೃಷ್ಣನು ಬಂದು ಅಕ್ಷಯಪಾತ್ರದಲ್ಲಿ ಅಂಟಿಕೊಂಡಿದ್ದ ಒಂದು ಅಗಳನ್ನು ನುಂಗಿ ತೇಗಿದನು. ಕೂಡಲೇ ಸ್ನಾನ ಮಾಡಲು ಹೋದ ದುರ್ವಾಸನಿಗೂ ಅವನೊಂದಿಗಿದ್ದ ಬ್ರಾಹ್ಮಣರಿಗೂ ಹೊಟ್ಟೆಯುಬ್ಬರಿಸಿ, ಊಟವೆಂದರೆ ಹೆದರಿ, ಹಾಗಿಂದ ಹಾಗೆಯೇ ಓಡಿಹೋದರು.

ಒಮ್ಮೆ ದುರ್ವಾಸನು ಸಂಚರಿಸಿಕೊಂಡಿದ್ದಾಗ ವಿದ್ಯಾಧರಿಯೊಬ್ಬಳು ಅವನಿಗೆ ಒಂದು ಹೂವಿನ ಮಾಲೆಯನ್ನು ಕೊಟ್ಟಳು. ದುರ್ವಾಸನು ಆ ಮಾಲೆಯನ್ನು ತೆಗೆದುಕೊಂಡು ಇಂದ್ರಲೋಕಕ್ಕೆ ಹೋಗಿ ದೇವೇಂದ್ರನಿಗೆ ಕೊಟ್ಟನು. ದೇವೇಂದ್ರನು ಆ ಮಾಲೆಯನ್ನು ತನ್ನ ಐರಾವತ ಆನೆಗೆ ಕೊಟ್ಟನು. ಐರಾವತವು ಅದನ್ನು ಬೀಸಿ ದೂರ ಬಿಸುಟಿತು. ಇದನ್ನು ನೋಡಿ ದುರ್ವಾಸನಿಗೆ ಬಹಳ ಅವಮಾನವಾಯಿತು. ಇಂದ್ರನ ಐಶ್ವರ್ಯವೆಲ್ಲಾ ಸಮುದ್ರದ ಪಾಲಾಗುವಂತೆ ಶಪಿಸಿದನು ದುರ್ವಾಸ. ಹಾಗೆಯೇ ಮತ್ತೊಮ್ಮೆ ದುರ್ವಾಸನು ಅಂಬರೀಷನ ದ್ವಾದಶೀ ಪಾರಣೆಯಲ್ಲಿ ಅಂಬರೀಷನ ಮೇಲೆ ಕೋಪಿಸಿಕೊಂಡಾಗ, ವಿಷ್ಣು ಚಕ್ರವು ಅವನನ್ನು ಓಡಿಸಿಕೊಂಡು ಹೋಗಿ ಅಂಬರೀಷನಿಗೇ ಶರಣಾಗುವಂತೆ ಮಾಡಿತು. ಹೀಗೆ ಪರಾಭವಗಳನ್ನುಂಡರೂ, ದುರ್ವಾಸನು ಮುಂಗೋಪಕ್ಕೆ ಉದಾಹರಣೆಯಾಗಿರುವನು.





# ಶ್ಯಮಂತಕಮಣಿ

ಸತ್ರಾಜಿತ್ತು ಎಂಬ ರಾಜನು ಸೂರ್ಯನನ್ನು ಮೆಚ್ಚಿಸಿ ಶ್ಯಮಂತಕಮಣಿಯನ್ನು ಬಹುಮಾನವಾಗಿ ಪಡೆದನು. ಅದು ದಿನಾ ಎಂಟು ಖಂಡಿ ಬಂಗಾರವನ್ನು ಕೊಡುವಂತಹುದು.

ಒಂದು ಸಾರಿ ಕೃಷ್ಣನು ಸತ್ರಾಜಿತ್ತುವಿನ ಬಳಿಗೆ ಬಂದು ಶ್ಯಮಂತಕಮಣಿಯನ್ನು ಕುರಿತು ವಿಚಾರಿಸಿ, ಅದನ್ನು ತನಗೆ ಕೊಡುವಂತೆ ಕೇಳಿದನು. ಆದರೆ ಸತ್ರಾಜಿತ್ತು ಕೃಷ್ಣನಿಗೆ ಮಣಿಯನ್ನು ಕೊಡಲು ನಿರಾಕರಿಸಿದನು.





ಮುಂದೆ ಒಂದಾನೊಂದು ದಿನ ಸತ್ರಾಜಿತ್ತುವಿನ ತಮ್ಮ ಪ್ರಸೇನನು ಆ ಮಣಿಯನ್ನು ಧರಿಸಿಕೊಂಡು ಬೇಟೆಯಾಡಲು ಹೋದನು.



ಅರಣ್ಯದಲ್ಲಿ ಪ್ರಸೇನನು ಬೇಟೆಯಾಡುತ್ತಿದ್ದಾಗ ಒಂದು ಸಿಂಹವು ಅವನನ್ನು ಕೊಂದು, ಶ್ಯಮಂತಕ ಮಣಿಯನ್ನು ಎತ್ತಿಕೊಂಡು ಹೋಯಿತು.



ಆಗ ಜಾಂಬವಂತನು ಸಿಂಹವನ್ನು ಇದಿರಿಸಿ ಹೊಡೆದು ಕೊಂದು, ಶ್ಯಮಂತಕ ಮಣಿಯನ್ನು ತೆಗೆದುಕೊಂಡು ಹೋಗಿ ತನ್ನ ಕುಮಾರಿಯಾದ ಜಾಂಬವತಿಗೆ ಕೊಟ್ಟನು.



ಶ್ಯಮಂತಕಮಣಿಯನ್ನು ಕೃಷ್ಣನೇ ಕದ್ದುಕೊಂಡು ಹೋದನೆಂದು ಅಪವಾದ ಹುಟ್ಟಿತು. ಈ ಅಪವಾದವನ್ನು ಕಳೆದುಕೊಳ್ಳಲು ಕೃಷ್ಣನು ಪ್ರಸೇನನ ಜಾಡು ಹುಡುಕುತ್ತಾ, ಅರಣ್ಯದಲ್ಲಿ ಜಾಂಬವಂತನ ಗುಹೆಗೆ ಬಂದು, ಅವನೊಂದಿಗೆ ಯುದ್ಧ ಮಾಡಿ ಸೋಲಿಸಿದನು.

ಜಾಂಬವಂತನು ಕೃಷ್ಣನನ್ನು ಮೆಚ್ಚಿ ಶ್ಯಮಂತಕ ಮಣಿಯನ್ನು ಕೊಟ್ಟು, ತನ್ನ ಮಗಳು ಜಾಂಬವತಿಯನ್ನೂ ಕೃಷ್ಣನಿಗೇ ಮದುವೆ ಮಾಡಿ ಕೊಟ್ಟನು. ಕೃಷ್ಣನ ಎಂಟು ಮಂದಿ ಪತ್ನಿಯರಲ್ಲಿ ಅವಳೂ ಒಬ್ಬಳು.





ಕೃಷ್ಣನು ಶ್ಯಮಂತಕಮಣಿಯನ್ನು ತೆಗೆದುಕೊಂಡು ಹೋಗಿ ಸತ್ರಾಜಿತ್ತುವಿಗೆ ಕೊಟ್ಟನು. ಸತ್ರಾಜಿತ್ತು ಸಂತೋಷಪಟ್ಟು ಕೃಷ್ಣನಿಗೆ ತನ್ನ ಮಗಳು ಸತ್ಯಭಾಮೆಯನ್ನು ಕೊಟ್ಟು ಮದುವೆ ಮಾಡಿದನು.

ನ್ಯಾಯವಾಗಿ ಸತ್ಯಭಾಮೆಯನ್ನು ಮದುವೆಯಾಗ ಬೇಕಾದವನು ಶತಧನ್ವನು. ಕೃತವರ್ಮ ಮತ್ತು ಅಕ್ರೂರ ಎಂಬ ಯಾದವರು ಶತಧನ್ವನನ್ನು ಕೆರಳಿಸಿ ಸತ್ರಾಜಿತ್ತುವನ್ನು ಕೊಂದು ಶ್ಯಮಂತಕಮಣಿಯನ್ನು ವಶಪಡಿಸಿ ತರಲು ಪ್ರೇರೇಪಿಸಿದರು.





ಅವರ ಪ್ರೇರೇಪಣೆಯಂತೆ ಶತಧನ್ವನು ಹೋಗಿ ಸತ್ರಾಜಿತ್ತು ನಿದ್ರೆಯಲ್ಲಿರುವಾಗ ಅವನನ್ನು ಕೊಲೆ ಮಾಡಿಬಿಟ್ಟನು.

ಸತ್ಯಭಾಮೆ ತನ್ನ ತಂದೆಯ ಮರಣಕ್ಕೆ ದುಃಖಿಸುತ್ತ, ಕೃಷ್ಣನನ್ನು ಶತಧನ್ವನ ಮೇಲೆ ಯುದ್ಧಕ್ಕೆ ಕಳುಹಿಸಿದಳು. ಯುದ್ಧದಲ್ಲಿ ಶತಧನ್ವನು ಸತ್ತುಹೋದನು.





ಆದರೆ ಶ್ಯಮಂತಮಣಿ ಶತಧನ್ವನ ಹತ್ತಿರ ಇರಲಿಲ್ಲ. ಅದು ಅವನ ಮಗ ಭೋಜನಬಳಿಗೆ ಸೇರಿತ್ತು. ಅಕ್ರೂರನು ಅದನ್ನು ತಂದು ಕೃಷ್ಣನಿಗೆ ಕೊಟ್ಟನು. ಶ್ಯಮಂತಕಮಣಿಯಿಂದ ಉಂಟಾದ ಹಿಂಸೆಗಳಿಗೆ ಪರಿಹಾರವಾಗಿ ಅಕ್ರೂರನು ಯಜ್ಞಗಳನ್ನು ಮಾಡಿದನು.



# ಭದ್ರಾಯು

**ಪೂ**ರ್ವಕಾಲದಲ್ಲಿ ದಶಾರ್ಣ ದೇಶದ ರಾಜನಾಗಿದ್ದ ವಜ್ರಬಾಹು ಎಂಬ ರಾಜನಿಗೆ ಅನೇಕ ಮಂದಿ ಪತ್ನಿಯರಿದ್ದರು. ಅವರಲ್ಲಿ ಸುಮತಿ ಎಂಬವಳು ಗರ್ಭಿಣಿಯಾದುದನ್ನು ನೋಡಿ ಸವತಿಯರು ಅಸೂಯೆಯಿಂದ ಕರುಬಿ, ಸುಮತಿಗೆ ಏನೋ ಮದ್ದು ಹಾಕಿಸಿದರು.

ಆಮೇಲೆ ಕಾಲಕ್ರಮದಲ್ಲಿ ಸುಮತಿ ಒಬ್ಬ ಮಗನನ್ನು ಹಡೆದಳು. ಆದರೆ ಅವಳ ಹೊಟ್ಟೆಗೆ ಬಿದ್ದ ಮದ್ದಿನಿಂದಾಗಿ ತಾಯಿಯೂ ಮಗನೂ ಸದಾ ರೋಗಿಷ್ಠರಾದರು. ಅವರನ್ನು ಸರಿಮಾಡಲು ಯಾವ ವೈದ್ಯರಿಗೂ ಸಾಧ್ಯವಾಗಲಿಲ್ಲ. ವಜ್ರಬಾಹು ಬೇಸತ್ತು ಅವರನ್ನು ಕಾಡಿನಲ್ಲಿ ಬಿಟ್ಟುಬರಲು ಕಳುಹಿಸಿಬಿಟ್ಟನು.

ಸುಮತಿ ಕಾಡಿನಲ್ಲಿ ಮಗನನ್ನೆತ್ತಿಕೊಂಡು ಬೀಳುತ್ತ ಏಳುತ್ತ ವೈಶ್ಯಪುರವನ್ನು ತಲಪಿದಳು. ಅಲ್ಲಿ ಒಬ್ಬ ವೈಶ್ಯನ ಹೆಂಡತಿ ಆ ತಾಯಿ ಮಗಂದಿರನ್ನು ಆದರಿಸಿ ತನ್ನ ಮನೆಯಲ್ಲೇ ಇರಿಸಿಕೊಂಡಳು. ಆದರೆ ಒಂದು ದಿನ ಸುಮತಿಯ ಮಗನು ಸತ್ತುಹೋದನು. ಅವಳು ಮಗನ ಶವದ ಮುಂದೆ ದಾರುಣವಾಗಿ ಅಳುತ್ತಿರಲು, ಋಷಭಯೋಗಿ ಬಂದು ತತ್ತ್ವೋಪದೇಶಗಳಿಂದ ಅವಳ ಶೋಕವನ್ನು ಶಮನಮಾಡಲು ಪ್ರಯತ್ನಿಸಿದನು. ಆದರೆ ಅವಳು ಅಳುವುದನ್ನು ಬಿಡದೆ ತಾನೂ ಸಾಯಲು ಸಿದ್ಧವಾಗಲು, ಯೋಗಿ ಅವಳ ಮಗನನ್ನು ಪರೀಕ್ಷಿಸಿ ದಿವ್ಯ ಭಸ್ಮವನ್ನು ಚೆಲ್ಲಿ ಬದುಕಿಸಿ, "ಭದ್ರಾಯು" ಎಂದು ಹೆಸರಿಟ್ಟನು. ತಾಯಿಯೂ ಆರೋಗ್ಯವಂತಳಾದಳು.

ಭದ್ರಾಯು ವೈಶ್ಯ ಕುಮಾರನೊಂದಿಗೆ ಸೊಗಸಾಗಿ ಬೆಳೆದನು. ಮತ್ತೆ ಆ ಋಷಭಯೋಗಿ ಬಂದು ಭದ್ರಾಯುವಿಗೆ ಚಂದ್ರಹಾಸವೆಂಬ ಖಡ್ಗವನ್ನೂ, ಶಂಖವನ್ನೂ ಕೊಟ್ಟನು. ಮೊದಲೇ ವೀರನೆನಿಸಿದ ಭದ್ರಾಯು ಈಗ ಮಹಾವೀರನಾದನು.

ಹೀಗಿರುವಾಗ ಅತ್ತ ಮಗಧದ ರಾಜನು ದಶಾರ್ಣ ದೇಶದ ಮೇಲೆ, ಅನ್ಯಾಯವಾಗಿ ದಂಡೆತ್ತಿ ವಜ್ರಬಾಹುವನ್ನು ಸೋಲಿಸಿಬಿಟ್ಟನು. ಈ ಸಂಗತಿ ಭದ್ರಾಯುವಿಗೆ ಗೊತ್ತಾಯಿತು. ಕೂಡಲೇ ಭದ್ರಾಯು ತನ್ನ ಖಡ್ಗವನ್ನೂ, ಶಂಖವನ್ನೂ ತೆಗೆದುಕೊಂಡು, ರಥವನ್ನೇರಿ, ವೈಶ್ಯಕುಮಾರನನ್ನು ಸಾರಥಿಯಾಗಿಟ್ಟುಕೊಂಡು ಮಗಧ ಸೇನೆಯ ಮೇಲೆ ಒಬ್ಬಂಟಿಗನಾಗಿ ಏರಿಹೋದನು. ಮಗಧರಾಜನು ಸೋತು ದಶಾರ್ಣ ದೇಶದ ಎಲ್ಲೆ ದಾಟಿ ಓಡಿಹೋದನು. ಭದ್ರಾಯು

ತನ್ನ ತಂದೆಯನ್ನು ದಶಾರ್ಣ ದೇಶದ ಸಿಂಹಾಸನದಲ್ಲಿ ಕೂಡಿಸಿ ತಾನು ವೈಶ್ಯಪುರಕ್ಕೆ ಹಿಂದಿರುಗಿದನು. ವಜ್ರಬಾಹು ತನ್ನ ತಂದೆ ಎಂದು ಭದ್ರಾಯುವಿಗೆ ಗೊತ್ತಿರುವ ಹಾಗೆ ವಜ್ರಬಾಹುವಿಗೆ ಅವನು ತನ್ನ ಮಗನೆಂದು ತಿಳಿಯದು.

ಅಷ್ಟಾದ ಮೇಲೆ ಋಷಭಯೋಗಿ ಚಂದ್ರಾಂಗದನೆಂಬ ರಾಜನ ಬಳಿಗೆ ಹೋಗಿ, ಭದ್ರಾಯುವಿನ ಸಂಗತಿಯನ್ನು ಹೇಳಿ, "ನಿನ್ನ ಮಗಳು ಕೀರ್ತಿಮಾಲಿನಿಯನ್ನು ಅವನಿಗೆ ಕೊಟ್ಟು ಮದುವೆಮಾಡು" ಎಂದನು.

ಚಂದ್ರಾಂಗದನು ಋಷಭನ ಅಪ್ಪಣೆಯಂತೆ ಭದ್ರಾಯುವಿಗೆ ಲಗ್ನಪತ್ರಿಕೆ ಕಳುಹಿಸಿ ಕರೆಯಿಸಿಕೊಂಡನು. ವಿವಾಹ ಮಹೋತ್ಸವಕ್ಕೆ ಅನೇಕ ರಾಜರನ್ನೂ ಆಹ್ವಾನಿಸಿದನು. ಹಾಗೆ ಬಂದವರಲ್ಲಿ ವಜ್ರಬಾಹುವೂ ಇದ್ದನು. ಅವನು ಭದ್ರಾಯುವನ್ನು ನೋಡಿ, ಈ ಹುಡುಗನೇ ತನಗೆ ರಾಜ್ಯವನ್ನು ಮರಳಿ ಕೊಡಿಸಿದವನೆಂದು ಗುರುತು ಹಿಡಿದು, "ಇವನು ಯಾರ ಮಗನೋ? ಹಿಂದೆ ತನ್ನ ಪರಿಚಯ ತಿಳಿಸದೆ ನನಗೆ ಸಹಾಯಮಾಡಿದ್ದನು." ಎಂದು ಕೇಳಲು ಚಂದ್ರಾಂಗದನು, "ಇವನು ನಿಮ್ಮ ಮಗನೇ" ಎಂದು ಹೇಳಿ ಋಷಭನಿಂದ ತಿಳಿದ ಅವನ ಸಂಗತಿಯನ್ನೆಲ್ಲಾ ಹೇಳಿದನು. ವಜ್ರಬಾಹು ತಾನು ಮಾಡಿದ ಹೀನ ಕೆಲಸಕ್ಕೆ ಪಶ್ಚಾತ್ತಾಪಪಟ್ಟು, ಸುಮತಿಯನ್ನೂ, ಭದ್ರಾಯುವನ್ನೂ ಕರೆದುಕೊಂಡು ಹೋಗಿ ಭದ್ರಾಯುವಿಗೆ ಪಟ್ಟಾಭಿಷೇಕಮಾಡಿದನು.

ಒಂದು ದಿನ ಅವನು ತನ್ನ ಹೆಂಡತಿಯೊಂದಿಗೆ ವನವಿಹಾರ ಮಾಡಿ, ಒಂದು ಮರದ ನೆರಳಿನಲ್ಲಿ ವಿಶ್ರಮಿಸಿಕೊಂಡಿರುವಾಗ, ಒಬ್ಬ ಬ್ರಾಹ್ಮಣನು "ಅಯ್ಯೋ! ಕಾಪಾಡು!" ಎಂದು ಕೂಗುತ್ತಾ ಬಂದು, ತನ್ನ ಹೆಂಡತಿಯನ್ನು ಒಂದು ಹುಲಿ ಎಳೆದುಕೊಂಡು ಹೋಗುವುದನ್ನು ತೋರಿಸಿದನು. ಭದ್ರಾಯು ಹುಲಿಯ ಮೇಲೆ ಎಷ್ಟು ಬಾಣಗಳನ್ನು ಪ್ರಯೋಗಿಸಿದರೂ ಪ್ರಯೋಜನವಿಲ್ಲದೆ ಹೋಯಿತು.

"ನಿನ್ನ ಶಂಖವೂ ಖಡ್ಗವೂ ಎಲ್ಲಿ? ನೀನು ಇಷ್ಟೊಂದು ಕೈಲಾಗದವನೆಂದು ನಾನು ಭಾವಿಸಿರಲಿಲ್ಲ" ಎಂದು ಬ್ರಾಹ್ಮಣನು ಅವನನ್ನು ನಿಂದಿಸಿದನು. "ಆ ಹುಲಿಗೆ ನಿಮ್ಮ ಹೆಂಡತಿಗೆ ಬದಲಾಗಿ ನನ್ನ ಹೆಂಡತಿಯನ್ನೇ ಕೊಡುತ್ತೇನೆ!" ಎಂದು ಭದ್ರಾಯು ಕಣ್ಣು ಮುಚ್ಚಿ ಹೇಳಿಕೊಳ್ಳುವಾಗ, "ಇನ್ನು ಸಾಕು. ನಿನ್ನ ಧೈರ್ಯವನ್ನು ಪರೀಕ್ಷಿಸಲಿಕ್ಕಾಗಿಯೇ ನಾನು ಈ ಮಾಯವನ್ನು ಕಲ್ಪಿಸಿದೆನು!" ಎಂದು ಹೇಳಿ ಆ ಬ್ರಾಹ್ಮಣನು ಹೊರಟುಹೋದನು. ಹುಲಿ ಇರಲಿಲ್ಲ. ಬ್ರಾಹ್ಮಣನೊಂದಿಗೆ ಅವನ ಹೆಂಡತಿಯೂ ಹೋಗುವುದನ್ನು ಭದ್ರಾಯು ನೋಡಿದನು.



# ಸೂಕ್ಷ್ಮ

ಒಬ್ಬ ರಾಜನೂ ಮಂತ್ರಿಯೂ ಆಗಾಗ ವೇಷ ಬದಲಾಯಿಸಿಕೊಂಡು ರಾಜ್ಯದೊಳಗೆ ತಿರುಗಾಡುತ್ತ, ಯಾವ ಮೂಲೆಯಲ್ಲಿ ಯಾರಿಗೆ ಏನು ಸಹಾಯಬೇಕಾದರೂ ಮಾಡುತ್ತಿದ್ದರು.

ಒಂದು ಸಾರಿ ಅವರು ಸಿರಿಪುರವೆಂಬ ಗ್ರಾಮದಲ್ಲಿ ಗೋವರ್ಧನನೆಂಬವನ ಮನೆಗೆ ಹೋಗಿ, "ನಾವು ಪ್ರಯಾಣಿಕರು ! ನಮಗಿಷ್ಟು ಊಟ ಹಾಕಬಲ್ಲಿರಾ ?" ಎಂದು ಕೇಳಿದರು.

"ನೀವೆಷ್ಟು ಮಂದಿ ?" ಎಂದು ಕೇಳಿ ಗೋವರ್ಧನನು ಇಬ್ಬರೇ ಎಂದು ತಿಳಿದುಕೊಂಡು, ಊಟ ಹಾಕುವೆನೆಂದು ಮಾತು ಕೊಟ್ಟು, ಅವರಿಬ್ಬರಿಗೆ ಆ ರಾತ್ರಿ ಒಳ್ಳೆಯ ಅಡಿಗೆ ಮಾಡಿಸಿ ಔತಣದ ಊಟವನ್ನೇ ಹಾಕಿಸಿದನು.

ಮತ್ತೊಂದು ದಿನ ರಾಜನೂ ಮಂತ್ರಿಯೂ ಗುರುಪುರದ ಗುರುವಯ್ಯನ ಮನೆಗೆ ಹೋಗಿ ಗೋವರ್ಧನನನ್ನು ಕೇಳಿದಂತೆಯೇ ಕೇಳಿದರು.

"ಆಗತ್ಯವಾಗಿ ಊಟಕ್ಕಿರಿ. ನೀವೆಷ್ಟು ಮಂದಿ ?" ಎಂದು ಗುರುವಯ್ಯ ಕೇಳಿದ.

ಅವರಿಬ್ಬರೇ ಎಂದು ತಿಳಿದು ಗುರುವಯ್ಯನು ಇಬ್ಬರಿಗೂ ತಡಮಾಡದೆ ಒಳ್ಳೆಯ ಊಟವನ್ನೇ ಬಡಿಸಿ ತೃಪ್ತಿಪಡಿಸಿದನು. ಅನಂತರ ಇಬ್ಬರೂ ಅಲ್ಲಿಂದ ಹೊರಟರು.

ರಾಜಭವನಕ್ಕೆ ಹೋದ ಮೇಲೆ ರಾಜನು, ಗುರುಪುರದ ಗುರುವಯ್ಯನಿಗೆ ಜೀವಿತಾಂತ್ಯದವರೆಗೂ ತಿಂಗಳಿಗೆ ನೂರುವರಹಗಳ "ಭರಣ" ಕೊಡುವಂತೆ ಏರ್ಪಾಡು ಮಾಡಿದನು.

ಆಗ ಮಂತ್ರಿ "ಸಿರಿಪುರದ ಗೋವರ್ಧನನೂ ಒಳ್ಳೆಯ ಔತಣದೂಟ ಹಾಕಿದನಲ್ಲಾ ? ಅವನನ್ನೇಕೆಬಿಟ್ಟಿರಿ ಪ್ರಭುವೆ ?" ಎಂದು ಕೇಳಿದನು.

"ಗೋವರ್ಧನು ನಾವಿಬ್ಬರೇ ಎಂದು ತಿಳಿದು ಔತಣದ ಏರ್ಪಾಡು ಮಾಡಿದ್ದಾನೆ. ಇಪ್ಪತ್ತು ಮಂದಿ ಅನ್ನುತ್ತಿದ್ದರೆ ಏನು ಮಾಡುತ್ತಿದ್ದನೋ ? ಅವನದು ದಾಂಭಿಕ ಆತಿಥ್ಯ. ಗುರುವಯ್ಯನದು ಹಾಗಲ್ಲ. ಅಡಿಗೆಯ ಪ್ರಯತ್ನಕ್ಕಾಗಿ ಎಷ್ಟು ಮಂದಿ ಎಂದು ಕೇಳಿ ನಿತ್ಯನಡೆಯುವ ಸಾದಾ ಊಟವನ್ನೇ ಹಾಕಿದ್ದಾನೆ. ಇದೇ ಸಹಜವಾದುದು, ದೊಡ್ಡದು !" ಎಂದನು ರಾಜ.

"ನಿಜನಿಜ" ಎಂದು ತಲೆಯೊಲಿದನು ಮಂತ್ರಿ.





# ಶಕುನಫಲ

ಒಂದು ಊರಿನಲ್ಲಿ ಭೀಮಪ್ಪನೆಂಬ ಸಾಹುಕಾರನಿದ್ದ. ಅವನಿಗೆ ಶಕುನಗಳೆಂದರೆ ತುಂಬಾ ನಂಬುಗೆ. ಪ್ರತಿಯೊಂದು ಕೆಲಸಕ್ಕೂ ಶಕುನದ ಮೇಲೆ ದೃಷ್ಟಿಯಿಡುವನು.

ಒಂದುದಿನ ಅವನು ನಗರಕ್ಕೆ ಹೋಗಬೇಕೆಂದುಕೊಂಡು, ಬೆಳಂಜಾವದ ಮುಸುಕು ಕತ್ತಲೆಯಲ್ಲೇ ಎದ್ದು ಬಾಗಿಲು ತೆರೆದನು. ತೆರೆದ ತಕ್ಷಣ ಮೊದಲು ಅವನ ಕಣ್ಣಿಗೆ ಬಿದ್ದುದು ನೆರೆಮನೆಯ ವೆಂಕಣ್ಣನವರ ಸಾಕು ಬೆಕ್ಕು; ಇದಿರಿನಲ್ಲೇ ಪ್ರತ್ಯಕ್ಷವಾಗಿತ್ತು.

"ಎದ್ದ ಕೂಡಲೇ ಹಾಳು ಬೆಕ್ಕಿನ ಮೂತಿ ನೋಡಿದೆ. ಈ ದಿನ ಎಷ್ಟೆಲ್ಲ ಅನರ್ಥಗಳುಂಟೋ ಏನೋ!" ಎಂದು ಹಲುಬುತ್ತ ಬೇಸರಪಟ್ಟು, ಒಳಗೆ ಹೋಗಿ ಸ್ವಲ್ಪ ಮಲಗಿದನು. ಹಾಗೆ ಸುಮ್ಮನಿದ್ದರೆ ಶಕುನದ ಕೆಟ್ಟ ಫಲ ಹೋಗುತ್ತದಂತೆ. ಬೆಕ್ಕಿನ ಮೇಲೆ ಬಂದ ಕೋಪದಿಂದ ಭೀಮಪ್ಪ ಬಾಗಿಲು ಹಾಕುವುದನ್ನು ಮರೆತು ಬಿಟ್ಟಿದ್ದನು. ಅಲ್ಲಿಯೇ ಹೊಂಚಿಕೊಂಡಿದ್ದ ಪಕ್ಕಾ ಕಳ್ಳನೊಬ್ಬ ಮೆಲ್ಲನೆ ಕೋಣೆಯೊಳಗೆ ಹೊಕ್ಕು, ಭೀಮಪ್ಪನ ತಲೆಯ ಹತ್ತಿರವಿದ್ದ ಗಲ್ಲಾಪೆಟ್ಟಿಗೆಯನ್ನು ಎತ್ತಿಕೊಂಡನು.

ಸುಮ್ಮನೆ ಕಣ್ಣು ಮುಚ್ಚಿಕೊಂಡಿದ್ದ ಭೀಮಪ್ಪ ತಲೆಯ ಹತ್ತಿರ ಆದ ಸಣ್ಣ ಶಬ್ದಕ್ಕೆ ಕಣ್ಣು ಬಿಡಿಸಿ, ಕಳ್ಳನನ್ನು ನೋಡಿ, "ಕಳ್ಳ! ಕಳ್ಳ!" ಎಂದು ಕೂಗುತ್ತ ಕಳ್ಳನನ್ನು ಹಿಡಿಯಲು ನೋಡಿದನು. ಕಳ್ಳ ಆ ಪೆಟ್ಟಿಗೆಯಿಂದಲೇ ಭೀಮಪ್ಪನ ತಲೆಗೆ ಕುಟ್ಟಿ, ಓಡಿಹೋಗಿ ಕತ್ತಲೆಯಲ್ಲಿ ಮರೆಯಾದನು.

ಭೀಮಪ್ಪನ ಹಣದ ಪೆಟ್ಟಿಗೆ ಹೋಯಿತು. ಎದ್ದ ಕೂಡಲೇ ಹಾಳಾದ ಬೆಕ್ಕಿನ ಮೂತಿ ನೋಡಿದುದರಿಂದಲೇ ಹೀಗಾಯಿತೆಂದು ಬೆಕ್ಕನ್ನು ಬೈದುಕೊಳ್ಳುತ್ತ, ಕಳ್ಳನನ್ನು ಕುರಿತು ಕೋತ್ವಾಲನ ಹತ್ತಿರ ಫಿರ್ಯಾದಿಮಾಡಬೇಕೆಂದು ಭೀಮಪ್ಪ ನಗರಕ್ಕೆ ಹೊರಟನು.

ಕೋತ್ವಾಲನ ಅಧಿಕಾರದಲ್ಲಿರುವವನು ಭೀಮಪ್ಪನ ತಂಗಿಯ ಗಂಡನೇ. ಅವನ ಹೆಸರು ರಾಮರಾಜ. ಭೀಮಪ್ಪನು ಮಾಡುವ ವ್ಯಾಪಾರಕ್ಕೆ ಬಡ್ಡಿಯಿಲ್ಲದೆ ಬೇಕಾದಷ್ಟು ಹಣವನ್ನು ಸಾಲವಾಗಿ ಕೊಟ್ಟವನು ಈ ರಾಮರಾಜನೇ. ಸಾಲ ಕೊಟ್ಟು ಬಹಳಕಾಲವಾಗಿತ್ತು. ತಾನು ಕೊಟ್ಟ ಹಣವನ್ನು ಹಿಂದಿರುಗಿಸಿ ಕೊಡುವಂತೆ ರಾಮರಾಜನು ಎಷ್ಟುಸಾರಿ ಕೇಳಿದರೂ

ಜಿ. ಸಾಂಬ

ಭೀಮಪ್ಪನು "ಇಂದು, ನಾಳೆ" ಎನ್ನುತ್ತ ಕಾಲ ದೂಡಿಕೊಂಡೇ ಇದ್ದನು.

ಆದುದರಿಂದ ಭೀಮಪ್ಪನು ಸರಿಯಾಗಿ ಅಂಟು ಕೊಡುವ ಹಾಗೆ ತನ್ನ ಮನೆಯಲ್ಲಿ ನಡೆದ ಕಳ್ಳತನ ವನ್ನು ಕುರಿತು ಹೇಳಿ, "ನೋಡಿ ಬಾವಯ್ಯಾ, ಆ ಪೆಟ್ಟಿಗೆಯಲ್ಲಿದ್ದ ಹಣವನ್ನು ನಿಮಗೆ ಕೊಡ ಬೇಕೆಂತಲೇ ತಯಾರಿಸಿಟ್ಟಿದ್ದೆ. ನೀವು ಸ್ವಲ್ಪ ಶ್ರಮ ಪಟ್ಟು ಆ ಕಳ್ಳನನ್ನು ಹಿಡಿದುಬಿಟ್ಟರೆ ನಿಮ್ಮ ಸಾಲವೆಲ್ಲಾ ಮುಗಿದುಹೋಗುತ್ತೆ. ಇಲ್ಲದಿದ್ದರೆ ನಿಮ್ಮ ಸಾಲ ಹಿಂದಿರುಗಿಸಬೇಕಾದರೆ ಇನ್ನೆಷ್ಟು ಕಾಲವಾಗುತ್ತೋ ಏನೋ! ಅಸಲು ಇದಿಷ್ಟೂ ಆ ಮಾರಿಬಡಿದ ಬೆಕ್ಕಿ ನಿಂದಾಯಿತು!" ಎಂದನು.

ರಾಮರಾಜನು ಭೀಮಪ್ಪ ಹೇಳಿದುದನ್ನೆಲ್ಲಾ ಕೇಳಿ, "ನಾನು ಆ ಕಳ್ಳನನ್ನು ಹಿಡಿಯಲು ಗಟ್ಟಿ ಪ್ರಯತ್ನಮಾಡಿಯೇ ಮಾಡುತ್ತೇನನ್ನಿ. ನೀವೇನೋ ಹೇಳಿದಿರಲ್ಲ? ಬೆಕ್ಕಿಗೂ ಈ ಕಳ್ಳತನಕ್ಕೂ ಏನು ಸಂಬಂಧ? ನಾನು ಕೂಡಾ ಈ ದಿನ ಬೆಳಿಗ್ಗೆ ಎದ್ದ ಕೂಡಲೇ ಬೆಕ್ಕಿನ ಮುಖ ನೋಡಿದೆ. ನನ್ನ ಮನೆ ಯಲ್ಲಿ ಯಾವ ಕಳ್ಳತನವೂ ನಡೆಯಲಿಲ್ಲವಲ್ಲಾ? ಇರಲಿ, ಮೊದಲು ನಮ್ಮನೆಗೆ ಹೋಗಿ ಊಟಮಾಡಿ ಬನ್ನಿ. ನಿಮ್ಮ ತಂಗಿ ನಿಮ್ಮನ್ನು ನೋಡಿ ಬಹಳ ಕಾಲವಾಯಿತು ಅಂತ ಹೇಳುತ್ತಾ ಇದ್ದಳು. ನಿಮ್ಮನ್ನು ನೋಡಿದರೆ ಅವಳಿಗೆ ಸಂತೋಷವಾದೀತು" ಎಂದು ಹೇಳಿ ಭೀಮಪ್ಪನನ್ನು ತನ್ನ ಮನೆಗೆ ಕಳುಹಿಸಿದನು.

ಭೀಮಪ್ಪನು ರಾಮರಾಜನ ಮನೆಯಲ್ಲಿ ಊಟ ಮಾಡಿ, ತಂಗಿಯೊಡನೆ ಬಾಯಿ ತುಂಬ ಮಾತಾಡಿ, ಮತ್ತೆ ಕೋತ್ವಾಲ ಕಚೇರಿಗೆ ಬಂದನು. ಅಷ್ಟರೊಳಗೆ ರಕ್ಷಕಭಟರು ಸಂತೆ ಬೀದಿಯಲ್ಲಿ ಹಿಡಿದ ಒಬ್ಬ ಕಳ್ಳನನ್ನು ಅಲ್ಲಿಗೆ ತಂದಿದ್ದರು. ಸಂತೆಯ ಗಡಿಬಿಡಿ ಯಲ್ಲಿದ್ದ ಯಾವನದೋ ಜೇಬನ್ನು ಕತ್ತರಿಸುವಾಗ ಅವನು ಸಿಕ್ಕಿಬಿದ್ದನಂತೆ.

ರಾಮರಾಜನು ಆ ಕಳ್ಳನೊಂದಿಗೆ ಪ್ರಶ್ನೋತ್ತರ ನಡೆಯಿಸುತ್ತಿದ್ದಾಗ ಭೀಮಪ್ಪ ಅಲ್ಲಿಗೆ ಬಂದನು. ಬಂದ ಕೂಡಲೇ ಅವನು ಆ ಕಳ್ಳನನ್ನು ನೋಡಿ.



"ಇವನೇ! ಇವನೇ! ಬಾವಯ್ಯಾ! ರಾತ್ರಿ ನಮ್ಮ ಮನೆಯಲ್ಲಿ ಕಳ್ಳತನಮಾಡಿ ನನ್ನ ತಲೆಗೆ ಹೊಡೆದವನು ಇವನೇ. ಎಂಥಾ ಓಟ ಓಡಿದ! ಬಾವಾ, ನೀವು ಬಹಳ ಗಟ್ಟಿಗರೇ ಸರಿ. ನಾನು ಫಿರ್ಯಾದಿಮಾಡಿ ಎರಡು ಗಂಟೆಯಾಗುವುದರೊಳಗೇ ಕಳ್ಳನನ್ನು ಹಿಡಿದು ಬಿಟ್ಟಿರಲ್ಲ!" ಎಂದು ಉತ್ಸಾಹದಿಂದ ಕೂಗಿ ಹೇಳಿದನು. ತನ್ನ ಫಿರ್ಯಾದಿಯ ಆಧಾರದಲ್ಲೇ ರಾಮರಾಜನು ಕಳ್ಳನನ್ನು ಹಿಡಿದನೆಂದು ನಂಬಿದ್ದನು.

ಕಳ್ಳ ಕೂಡಾ ಭೀಮಪ್ಪನನ್ನು ನೋಡಿದ ಕೂಡಲೇ ಗುರುತು ಹಿಡಿದು, ಇನ್ನು ಸುಳ್ಳು ಹೇಳಿದರೆ ಕೋತ್ವಾಲನಿಂದ ಚೆನ್ನಾಗಿ ದೇಹಶುದ್ಧಿ ಯಾದೀತೆಂದು ಹೆದರಿ, ತಾನು ಭೀಮಪ್ಪನ ಮನೆಯಲ್ಲಿ ಗಲ್ಲಾ ಪೆಟ್ಟಿಗೆ ಕದ್ದುದು ನಿಜವೆಂದು ಒಪ್ಪಿದನು. ಅದನ್ನು ಎಲ್ಲಿ ಅಡಗಿಸಿಟ್ಟಿರುವೆನೆಂಬುದನ್ನೂ ಹೇಳಿದನು.

ಹಾಗೆ ಹೇಳುತ್ತಾ ಕಡೆಗೆ ಕಳ್ಳನು, "ನನ್ನ ಜನ್ಮದಲ್ಲಿ ನಾನು ಈವರೆಗೂ ಕಳ್ಳತನಮಾಡಿ ಸಿಕ್ಕಿಬಿದ್ದವನಲ್ಲ. ಈ ದಿನ ಬೆಳಿಗ್ಗೆ ಬೆಕ್ಕಿನ ಮುಖ ನೋಡಿದೆ. ನನ್ನ ಹೆಂಡ್ತಿ ಇವತ್ತು ಕಳ್ಳತನಕ್ಕೆ ಹೋಗಬೇಡೀ ಅಂತ ತುಂಬಾ ಬಡಕೊಂಡಳು. ಲಕ್ಷ್ಯಮಾಡದೆ ಬಂದು ಸಿಕ್ಕಿಬಿದ್ದೆ ಸ್ವಾಮಿ" ಎಂದನು. ಆಗ ರಾಮರಾಜನು ಭೀಮಪ್ಪನೊಂದಿಗೆ, "ಆದರೆ ಬಾವಾ, ನಾನು ಕೂಡಾ ಬೆಳಿಗ್ಗೆ ಎದ್ದ ಕೂಡಲೇ ಬೆಕ್ಕಿನ ಮುಖ ನೋಡಿದ್ದರಿಂದ ನನಗೆ ಅಪಾರ ಲಾಭವೇ ಆಯಿತು. ನಿಮ್ಮಿಂದ ಇನ್ನು ಸಾಲ ವಸೂಲಾಗದು ಎಂದು ಕೊಂಡ ಹಣವೆಲ್ಲಾ ಈ ದಿನ ನನಗೆ ಸಿಗಲಿದೆ, ನೋಡಿದಿರಾ!" ಎಂದನು.

ರಾಮರಾಜನು ಕಳ್ಳನನ್ನು ಕರೆದುಕೊಂಡು, ಪೆಟ್ಟಿಗೆ ವಶಪಡಿಸಿಕೊಳ್ಳಲು ಹೊರಡಲು, ಭೀಮಪ್ಪನು ತನ್ನೊಳಗೆ "ಛೆ! ಕಳೆದು ಹೋದ ಪೆಟ್ಟಿಗೆ ಸಿಕ್ಕಿತೆಂಬ ಬರಿ ಮಾತೇ ನನ್ನ ಪಾಲಿಗಾಯಿತಲ್ಲದೆ ಮತ್ತೇನಿದೆ ಮಣ್ಣು?" ಎಂದು ವ್ಯಸನಪಡುತ್ತಾ ಮನೆಗೆ ಹೋದನು.

ಮನೆಯ ಮುಂದೆ ಅಳುಮೋರೆಯಿಂದ ನಿಂತಿದ್ದ ನೆರೆಮನೆ ವೆಂಕಣ್ಣನವರನ್ನು ನೋಡಿ ಭೀಮಪ್ಪ, "ಇದೇನು ಚಿಂತೆಯಲ್ಲಿದೀರಲ್ಲಾ? ಏನಾಯಿತು?" ಎಂದು ಕೇಳಿದನು.

"ಏನು ಹೇಳಲಿ ಭೀಮಪ್ಪನವರೇ? ಸುಂದರ ರಾಣಿಯ ಹಾಗಿದ್ದ ನನ್ನ ಸಾಕುಬೆಕ್ಕು, ಫಕ್ಕನೆ ಕುದುರೇ ಗಾಡಿಯ ಬುಡಕ್ಕೆ ಸಿಕ್ಕಿಸತ್ತು ಹೋಯಿತು. ಪಾಪ! ಅದು ಬೆಳಿಗ್ಗೆ ಎದ್ದು ಯಾವ ಪಾಪಿಯ ಮುಖ ನೋಡಿತೋ!" ಎಂದರು ವೆಂಕಣ್ಣಪ್ಪ.

ಆ ಬೆಕ್ಕು ಬೆಳಂಜಾವದಲ್ಲಿ ತನ್ನ ಮುಖವನ್ನೇ ನೋಡಿತೆಂಬುದು ನೆನಪಾಗಿ ಭೀಮಪ್ಪನ ಮನಸ್ಸು ಝಲ್ಲೆಂದಿತು.





# ಅಡ್ಡಗೋಡೆ

ಒಂದು ಊರಿನಲ್ಲಿ ಸಂತೋಷಪ್ಪನೆಂಬವರು ಸ್ವತಃ ಕಷ್ಟಾರ್ಜಿತದಿಂದಲೇ ತುಂಬಾ ಹಣ ಸಂಪಾದಿಸಿ ಶ್ರೀಮಂತರೆನಿಸಿದ್ದರು. ಆದುದರಿಂದ ಹಣವು ಲೆಕ್ಕ ಪಕ್ಕವಿಲ್ಲದೆ ಖರ್ಚಾಗದಂತೆ ಬಹಳ ಜಾಗರೂಕತೆ ಯಿಂದ ನೋಡಿಕೊಳ್ಳುತ್ತಿದ್ದರು. ಒಂದು ಕಾಸು ಹೆಚ್ಚು ಕಡಿಮೆಯಾದರೆ ಎರಡು ದಿನ ಸಂಶೋಧನೆ ನಡೆಸುವರು. ಆದುದರಿಂದ ಮನೆಯೊಳಗಿನವರಿಗೆ ಹಣದ ವಿಷಯದಲ್ಲಿ ಸಂತೋಷಪ್ಪನವರೆಂದರೆ ಎಲ್ಲಿಲ್ಲದ ಭಯ.

ಹೀಗಿರುವಾಗ ಸಂತೋಷಪ್ಪನವರ ಅಡಿಗೇ ಹೆಂಗುಸು, ಅಲ್ಲಿಯ ಕೆಲಸಬಿಟ್ಟು, ತನ್ನ ಮಗನು ಉದ್ಯೋಗಮಾಡುವ ಊರಿಗೆ ಹೊರಟುಹೋದಳು. ಸಂತೋಷಪ್ಪನವರಿಗೆ ಇನ್ನೊಬ್ಬಳು ಅಡಿಗೇ ಹೆಂಗುಸಿನ ಅಗತ್ಯವಿತ್ತು. ಅದಕ್ಕಾಗಿ ಅವರಿವರ ಹತ್ತಿರ ಹೇಳಿದ್ದರು.

ಆ ಸಮಯದಲ್ಲಿ ಯಾರೋ ಕಳುಹಿಸಿದಂತೆ ಮಧ್ಯಮ ವಯಸ್ಸಿನ ಹೆಂಗುಸೊಬ್ಬಳು ಸಂತೋಷಪ್ಪ ನವರಲ್ಲಿಗೆ ಬಂದು, "ನನ್ನ ಹೆಸರು ಸಾವಿತ್ರಿ ಅಂತ. ನಿಮ್ಮ ಮನೆಯಲ್ಲಿ ಅಡಿಗೇಮಾಡಲು ಜನ ಬೇಕು ಅಂತ ಸಮಾಚಾರ ಕೇಳಿ ಬಂದೆ. ನಿಮ್ಮ ಹಳೇ ಅಡಿಗೇ ಹೆಂಗುಸೇ ನನ್ನನ್ನು ಕಳಿಸಿದಳು" ಎಂದಳು. ಈ ಸಾವಿತ್ರಿ ಶುಚಿಯಾಗಿಯೂ, ಶುಭ್ರವಾಗಿಯೂ, ಚುರುಕಿನವಳಾಗಿಯೂ ಕಾಣುತ್ತಿದ್ದಳು. ಆದುದರಿಂದ ಸಂತೋಷಪ್ಪನವರು ತೃಪ್ತಿಗೊಂಡು, "ದಿನಾ ಉಳಿದುಹೋಗುವ ಅನ್ನವನ್ನು ನೀನೇ ತೆಗೆದು ಕೊಂಡು ಹೋಗುವಿಯಾ? ಕಸಮುಸುರೆಯವಳಿಗೆ ಕೊಡುವಿಯಾ?" ಎಂದು ಪ್ರಶ್ನೆ ಮಾಡಿದರು.

ಸಾವಿತ್ರಿ ಸಣ್ಣಗೆ ನಕ್ಕು, "ನಾನು ಅಡಿಗೇಮಾಡಿದರೆ ಲೆಕ್ಕಕ್ಕೆ ಬೇಕಾದಷ್ಟೇ ಅನ್ನವಾಗುತ್ತದೆ. ಒಂದು ಮನೆ ಉಳಿಯೋದೂ ಅಳಿಯೋದೂ ಅಡಿಗೆಮನೆಯಿಂದಲೇ ಅಂತ ನನಗೆ ಚೆನ್ನಾಗಿ ಗೊತ್ತಿದೇರೀ!" ಎಂದಳು.

ಅವಳ ನ್ಯಾಯದ ಮಾತು ಸಂತೋಷಪ್ಪನವರನ್ನು ಪೂರ್ಣ ತೃಪ್ತಿಗೊಳಿಸಿತು. "ಹಾಗಿದ್ದರೆ ಸರಿಯಮ್ಮ. ಈಗ ಒಂದು ಹೊತ್ತಿನ ಅಡಿಗೇಮಾಡು. ನಾಳಿನಿಂದ ಕೆಲಸಕ್ಕೆ ಸೇರಿಕೊಳ್ಳುವೆಯಂತೆ" ಎಂದು ಸಾವಿತ್ರಿ ಯನ್ನು ತನ್ನ ಹೆಂಡತಿಯ ಕಡೆಗೆ ಒಪ್ಪಿಸಿ, ಸಂತೋಷಪ್ಪ ನವರು ಏನೋ ಕೆಲಸದ ಮೇಲೆ ಹೊರಗೆ ಹೋದರು.

ಸಂತೋಷಪ್ಪನವರ ಹೆಂಡತಿ ಸಾವಿತ್ರಿಯನ್ನು ನೋಡಿ, "ನಿನ್ನನ್ನು ಕೆಲಸಕ್ಕೆ ಒಪ್ಪಿಕೊಳ್ಳುವವರೆ

ಎಂ. ಕೆ. ಈಶ್ವರರಾವ್

ಗಷ್ಟೇ ಅವರ ಪ್ರಮೇಯ. ಒಳಗಿನ ವಿಷಯದಲ್ಲಿ ನನ್ನದೇ ಅಧಿಕಾರ. ಒಳಗಿನ ಗುಟ್ಟು ಹೊರಗೆ ಹಾಕಿದರೆ ನೀನು ಇಲ್ಲಿರಲು ಸಾಧ್ಯವಿಲ್ಲವೆಂಬುದನ್ನು ನೆನಪಿಟ್ಟುಕೋಮ್ಮ!" ಎಂದು ಎಚ್ಚರಿಸಿಟ್ಟಳು.

"ಆಗಲಮ್ಮ. ಸಂಸಾರ ಗುಟ್ಟು, ವ್ಯಾಧಿರಟ್ಟು ಅಂತ ನನಗೆ ಗೊತ್ತಿದೇಮ್ಮ." ಎಂದಳು ಸಾವಿತ್ರಿ.

ಆದರೆ ಆ ಮನೆಯೊಳಗಿನ ಗುಟ್ಟು ಏನೆಂಬುದು ಸಾವಿತ್ರಿಗೆ ಬೇಗದಲ್ಲೇ ತಿಳಿದುಹೋಯಿತು. ಸಂತೋಷಪ್ಪನವರೆಂದರೆ ಯಜಮಾನತಿಗೆ ತುಂಬ ಭಯ. ಯಜಮಾನರು ತಮ್ಮ ಸುಖವನ್ನೂ ನೋಡದೆ ಕಷ್ಟಪಟ್ಟು ಸಂಪಾದಿಸುವವರು. ಮನೆಯೊಳಗಿನವರಗೆ ಯಾವುದಕ್ಕೂ ಕಡಿಮೆಮಾಡುತ್ತಿದ್ದಿಲ್ಲ. ಆದರೂ ಮನೆಯೊಳಗೆ ಯಾರಿಗೂ ಯಜಮಾನರ ಮೇಲೆ ಪ್ರೀತಿ ಇರಲಿಲ್ಲ. ಆದಕ್ಕೆ ಕಾರಣವೇನೆಂದರೆ, ಅವರು ಯಾರನ್ನೂ ನಂಬಿ ಒಂದು ಪೈಸಾ ಸಹಾ ಕೊಡುವುದಿಲ್ಲ, ಪ್ರತಿಯೊಂದಕ್ಕೂ ಲೆಕ್ಕ ಕೇಳುವರು. ಅವರು ಮಹಾ ಲೋಭಿ ಎಂದೇ ಮನೆಯೊಳಗಿನವರ ಅಭಿಪ್ರಾಯ. ತಂದೆ ಮನೆಯಿಂದ ಹೊರಗೆ ಹೋದ ಕೂಡಲೇ ಮಕ್ಕಳು ಏನೋ ತಿಂಡಿಗೆಂತಲೂ, ಚಿಕ್ಕ ಪುಟ್ಟ ವಸ್ತುಗಳಿಗೆಂತಲೂ ತಾಯಿಯ ಹತ್ತಿರ ದುಡ್ಡು ಕೇಳುವರು. ಅಂತಹ ಲೆಕ್ಕಪಕ್ಕವಿಲ್ಲದ ಖರ್ಚುಗಳಿಗಾಗಿ ಯಜಮಾನತಿ ಮನೆಗೆ ತರಿಸಿದ ಸರಕುಗಳನ್ನು ರಹಸ್ಯವಾಗಿ ಮಾರಿ ಆ ಹಣವನ್ನು ತನ್ನ ಹತ್ತಿರ ಇಟ್ಟುಕೊಳ್ಳುವಳು.

ಈ ರಹಸ್ಯವನ್ನು ತಿಳಿದ ಮೇಲೆ ಸಾವಿತ್ರಿ ಸಹಿಸಿಕೊಂಡು ಸುಮ್ಮನಿರಲಾಗದೆ ಸಂತೋಷಪ್ಪನವರ ಹೆಂಡತಿಯೊಂದಿಗೆ, "ಅಮ್ಮಾ, ಅಗತ್ಯಕ್ಕಿಂತ ಹೆಚ್ಚು ಸಾಮಾನು ತರಿಸುವಿರಲ್ಲಾ? ಈ ವಿಷಯ ಯಜಮಾನರಿಗೆ ಗೊತ್ತಾಗಿಬಿಟ್ಟರೆ, ನಾನೇ ಹೆಚ್ಚು ಖರ್ಚು ಮಾಡುತ್ತೇನೆ ಅಂದುಕೊಳ್ಳುವರೇನೋ!" ಎಂದಳು.

"ನಿನಗೆ ಆ ಭಯ ಬೇಡಮ್ಮ, ಯಜಮಾನರು ಒಂದುಸಾರಿ ಖರ್ಚುಮಾಡಿದ ಮೇಲೆ ಮತ್ತೆ ಆ ಖರ್ಚನ್ನು ಕುರಿತು ಆಲೋಚಿಸುವವರಲ್ಲ," ಎಂದಳು ಸಂತೋಷಪ್ಪನವರ ಹೆಂಡತಿ.



ಆದರೆ ಸಾವಿತ್ರಿಗೆ ಆ ಮನೆಯೊಳಗಿನ ಮುಚ್ಚು ಮರೆಯ ಪರಿಸ್ಥಿತಿ ಏನೂ ಚೆನ್ನಾಗಿ ಕಾಣಲಿಲ್ಲ. ಮನೆಯೊಳಗಿರುವವರು ಮುಖ್ಯ ಯಜಮಾನರನ್ನು ಪರಕೀಯರಂತೆ ನೋಡುವುದನ್ನು ಸಹಿಸಲಾಗಲಿಲ್ಲ.

ಒಂದು ದಿನ ಯಾವ ಕಾರಣದಿಂದಲೋ ಹೊರಗಿನ ಕೆಲಸದವಳು ಬರಲಿಲ್ಲ. ಸಂತೋಷಪ್ಪನವರ ಹೆಂಡತಿ ಆ ದಿನವೇ ತಂದಿದ್ದ ನಾಲ್ಕು ವೀಸೆ ತುಪ್ಪದ ಅರ್ಧವನ್ನು ಒಂದು ಪಾತ್ರೆಗೆ ಹಾಕಿ ಸಾವಿತ್ರಿಯ ಕೈಗೆ ಕೊಟ್ಟು, ಹಿಂಬಾಗಿಲಿನಿಂದ ಹೊರಗೆ ಹೋಗಿ ಅಂಗಡಿಯಲ್ಲಿ ಮಾರಿ ಹಣ ತರಲು ಹೇಳಿದಳು.

ಸಾವಿತ್ರಿ ಹಾಗೆಯೇ ಹೋಗಿ ತುಪ್ಪವನ್ನು ಮಾರಿ, ಹಣವನ್ನೂ ಪಾತ್ರೆಯನ್ನೂ ತೆಗೆದುಕೊಂಡು. ಮುಂದಿನ ಬಾಗಿಲಿನಿಂದಲೇ ಮನೆಯೊಳಗೆ ಬಂದಳು. ಅವಳು ತುಪ್ಪಮಾರಿ ಸಿಕ್ಕಿದ ಹಣದಲ್ಲಿಯ ಒಂದು ನಾಣ್ಯವನ್ನು ಸಂತೋಷಪ್ಪನವರಿಗೆ ತೋರಿಸಿ "ಇದು ಸೀಸದ ನಾಣ್ಯವಲ್ಲವಷ್ಟೇ, ಸ್ವಲ್ಪ ನೋಡಿ ಅಯ್ಯಾ" ಎಂದಳು. ಸಂತೋಷಪ್ಪನವರು ಅದನ್ನು ಪರೀಕ್ಷಿಸಿ ನೋಡಿ, "ಒಳ್ಳೆಯ ನಾಣ್ಯವೇ, ಇದು ನಿನ್ನ ಹತ್ತಿರ ಹೇಗೆ ಬಂತು?" ಎಂದು ಪ್ರಶ್ನಿಸಿದರು.

"ಅಂಗಡಿಯಲ್ಲಿ ತುಪ್ಪ ಮಾರಿದೆ. ಅಂಗಡಿಯವನು ಕೊಟ್ಟ ಹಣ." ಎಂದಳು ಸಾವಿತ್ರಿ.

"ತುಪ್ಪ ಮಾರಲು ನಿನಗೆಲ್ಲಿ ಸಿಕ್ಕಿತು?" ಎಂದು ಸಂತೋಷಪ್ಪ ಅವಳನ್ನು ಆಶ್ಚರ್ಯದಿಂದ ನೋಡುತ್ತ ಕೇಳಿದರು.

ಸಾವಿತ್ರಿ ಭಯಪಟ್ಟವಳಂತೆ ಅಭಿನಯಿಸುತ್ತ, ನಡೆದ ಸಂಗತಿಯನ್ನು ಹೇಳಿ, "ಹೀಗೆ ದಿನಾ ನಡೆಯುತ್ತಾ ಇದೆಯಲ್ಲ ಸ್ವಾಮಿ? ನಿಮಗೆ ಗೊತ್ತಿಲ್ಲದಿದ್ದೀತೇ ಅಂದುಕೊಂಡೆ." ಎಂದಳು.

"ಹಾಗೇನು ಕತೆ?" ಎಂದು ಸಂತೋಷಪ್ಪನವರು ಹೆಂಡತಿಯನ್ನು ಕರೆದು ನಾನಾ ವಿಧವಾಗಿ ಬೈದರು. ಅವರ ಹೆಂಡತಿ ಮಾತ್ರ ಗಂಡನಿಗೆ ಯಾವ ಉತ್ತರವನ್ನೂ ಕೊಡದೆ ಸುಮನಿದ್ದು, ಸಾವಿತ್ರಿಯನ್ನು ಮಾತ್ರ ನುಂಗುವ ಕಣ್ಣುಗಳಿಂದ ನೋಡಿದಳು. "ಗುಮ್ಮನ್ನುಗ್ಗಿಸುಕೀ ಹಾಗೆ ಸುಮ್ಮನಿರುವೆಯಾ?



ಉತ್ತರ ಹೇಳುವಿಯಾ ಇಲ್ಲವಾ? ಅಂ!" ಎಂದು ಸಂತೋಷಪ್ಪನವರು ಹೆಂಡತಿಯ ಮೇಲೆ ಕೈಯೆತ್ತಲು ನೋಡಿದರು.

"ಸ್ವಲ್ಪ ತಾಳಿರಿ ಸ್ವಾಮಿ! ನನಗೆ ತೋರಿದ್ದು ಹೇಳಿಬಿಡುತ್ತೇನೆ. ಇದರಲ್ಲಿ ನಿಜವಾದ ತಪ್ಪು ನಿಮ್ಮದೇ ಅಂತ ನನಗೆ ಕಾಣುತ್ತೆ. ನೀವು ಅಮ್ಮ ನವರ ಕೈಗೆ ಆಗಾಗ ಹಣ ಕೊಡುತ್ತಾ ಇದ್ದರೆ ಹೀಗೆ ಮಾಡುತ್ತಾರೆಯೆ? ಮನೆಯೊಳಗೆ ಹೆಂಗುಸರು ಮಕ್ಕಳಿಗೆ ಸಣ್ಣ ಪುಟ್ಟ ಖರ್ಚುಗಳು ಎಷ್ಟೋ ಇರುತ್ತವೆ ಸ್ವಾಮಿ. ಅಂಥಾದ್ದನ್ನೆಲ್ಲ ಹಾಳು ಖರ್ಚು ಅಂದುಕೊಳ್ಳಬಾರದು ಅಂತ ನನಗೆ ಕಾಣುತ್ತೆ. ಒಂದೊಂದುಸಾರಿ ಬೀದಿಯಲ್ಲಿ ಮನೆಗೆ ಬೇಕಾದ ಯಾವುದೋ ವಸ್ತು ಮಾರಿಕೊಂಡು ಹೋಗುತ್ತೇ ಅನ್ನಿ. ಪ್ರತಿಯೊಂದಕ್ಕೂ ಗಂಡನನ್ನು ಕೇಳಲಿಕ್ಕೆ ಸಾಧ್ಯವೇ ಹೇಳಿ? ನೀವು ಮನೆಯಲ್ಲೇ ಕುಳಿತಿರು ತ್ತೀರಾ? ಇದ್ದರೂ ಸುಸ್ತಿಯಾಗಿ ಮಲಗಿರುತ್ತೀರಿ ಅಂದುಕೊಳ್ಳಿ. ಆದರೂ ಅಮ್ಮನವರು ಮಾಡುವುದು ಸಹಾ ಒಳ್ಳೇದಲ್ಲ ಅಂತಲೇ ಹೇಳುತ್ತೇನೆ. ಈ ಕೆಲಸ ದಿಂದ ಅವರು ಮಕ್ಕಳ ಮುಂದೆ ಕೆಲಸದವರ ಮುಂದೆ ಸಹಾ ಸಣ್ಣತನಕ್ಕೆ ಇಳಿದುಬಿಡುತ್ತಾರೆ. ಮಕ್ಕಳಿಗೂ ಒಂದು ಬಗೆಯಿಂದ ಕಳ್ಳತನ ಕಲಿಸಿದ ಹಾಗೂ ಆಗುತ್ತೆ. ಗಂಡನ ಹತ್ತಿರ ವಾದಾಡಿ ಕೇಳಿ ತಗೊಂಡರೆ ಈ ತೊಂದರೆ ಇಲ್ಲ. ಗಂಡನೂ ಹೆಂಡತಿಯನ್ನು ಅಷ್ಟು ಹೆದರಿಸಿಡುವುದೂ ಒಳ್ಳೇದಲ್ಲಾನ್ನಿ. ಅಷ್ಟು ದೂರ ಏಕೆ? ನನ್ನ ಗಂಡನೂ ಹೀಗೇನೇ. ಅವರು ನನಗೆ ಆಗಾಗ ಸ್ವಲ್ಪ ಹಣ ಕೊಡುತ್ತಾ ಬಂದಿದ್ದರೆ ನನಗೆ ಈ ಅಡಿಗೇ ಹೆಂಗುಸಿನ ಕೆಲಸ ತಪ್ಪುತಿತ್ತು. ಈಗ ಈ ಮನೆ ಗುಟ್ಟು ರಟ್ಟುಮಾಡಿದೇ ಅಂತ ನನ್ನನ್ನು ಕಳಿಸಿಬಿಡುತ್ತೀರಿ ಅಂತ ನನಗೆ ಗೊತ್ತು." ಎಂದು ಹೇಳಿ ಸಾವಿತ್ರಿ ಹಣವನ್ನು ಸಂತೋಷಪ್ಪ ನವರಿಗೆ ಕೊಟ್ಟು ಹೊರಡಲು ಸಿದ್ಧಳಾದಳು.

ಅವಳು ಬಾಗಿಲು ದಾಟುವಷ್ಟರಲ್ಲಿ ಗಂಡ ಹೆಂಡಿ ರಿಬ್ಬರೂ, "ಸಾವಿತ್ರೀ, ನಾಳೆ ಯಾವಾಗಲಿನ ಹಾಗೆಯೇ ಬಂದುಬಿಡು" ಎಂದು ಕೂಗಿ ಹೇಳಿದರು.

ಅವರಲ್ಲಿ ಬದಲಾವಣೆ ಬಂದುದನ್ನು ತಿಳಿದು ಸಾವಿತ್ರಿ, ಹಾಸಿಗೆ ಹಿಡಿದಿದ್ದ ತನ್ನ ಗಂಡನಿಗಾಗಿ ಕೆಲವು ಮೂಸಂಬಿ ಹಣ್ಣುಗಳನ್ನು ಕೊಂಡು ಕೊಂಡು ತನ್ನ ಮನೆಗೆ ಹೋದಳು.

ಅವಳು ಗಂಡನಿಗೆ ಮೂಸಂಬಿ ಹಣ್ಣು ಸುಲಿದುಕೊಡುತ್ತ "ನೀವು ಕೈಕಾಲು ಬಿದ್ದು ಹಾಸಿಗೆ ಹಿಡಿದರೂ, ನಿಮ್ಮನ್ನು ಕುರಿತು ಸಣ್ಣ ಸುಳ್ಳು ಹೇಳಿ ಒಂದು ದಂಪತಿಗಳ ಮಧ್ಯದಲ್ಲಿದ್ದ ಅಡ್ಡಗೋಡೆ ಯನ್ನು ಉರುಳಿಸಿಬಿಟ್ಟೆ" ಎಂದಳು. ನಡೆದ ಸಂಗತಿ ಯನ್ನು ಕೇಳಿ ಅವಳ ಗಂಡನಿಗೂ ಸಂತೋಷವಾಯಿತು.



# ಅಸಮರ್ಥತೆಯೇ?

ಒಬ್ಬ ರಾಜನು ತನ್ನ ಮಂತ್ರಿಯೊಂದಿಗೆ "ನನ್ನ ಚಿಕ್ಕ ಮಗನು ಯಾರೊಂದಿಗೂ ಬೆರೆಯುವುದಿಲ್ಲ; ಮಾತಾಡುವುದಿಲ್ಲ. ಯಾವಾಗಲೂ ಒಬ್ಬಂಟಿಗನಾಗಿರುತ್ತಾನೆ. ಅವನನ್ನು ಹೇಗೆ ಸರಿಮಾಡುವುದೋ? ನನಗೆ ಅವನನ್ನು ಕುರಿತು ಬಹಳ ಚಿಂತೆಯಾಗಿದೆ." ಎಂದನು.

ಮಂತ್ರಿ ಕಿರುನಗು ನಕ್ಕು, "ಮಹಾರಾಜರೇ, ಗುಂಪಾಗಿ ತಿರುಗುವ ಕಾಗೆಗಳಿಗೆ ಜ್ಞಾನವಿರುವುದಿಲ್ಲ. ಜ್ಞಾನವಿರುವಂಥ ಹದ್ದುಗಳು ಯಾವಾಗಲೂ ಒಂಟಿಯಾಗಿಯೇ ವಿಹರಿಸುತ್ತವೆ." ಎಂದನು.

ಮತ್ತೆ ಕೆಲವು ದಿನಗಳ ಮೇಲೆ ರಾಜನು ಮಂತ್ರಿಯೊಂದಿಗೆ "ನನ್ನ ದೊಡ್ಡ ಮಗ ಯುವರಾಜನು ಆಗದ ಹೋಗದವರನ್ನೆಲ್ಲ ಸೇರಿಸಿಕೊಂಡು ಅವರೊಂದಿಗೇ ಕಾಲಕ್ಷೇಪ ಮಾಡುತ್ತಾನೆ. ನನಗೆ ಅವನನ್ನು ಕುರಿತು ಬಹಳ ಚಿಂತೆಯಾಗಿದೆ" ಎಂದನು.

ಮಂತ್ರಿ ಕಿರುನಗೆಯೊಂದಿಗೆ, "ಬಲಿಷ್ಠವಾದ ರಣ ಹದ್ದುಗಳು ನೋಣ, ಸೊಳ್ಳೆಗಳೊಂದಿಗೆ ಸ್ನೇಹಮಾಡಿ ತಮ್ಮ ಆಹಾರ ಎಲ್ಲಿದೆಯೆಂದು ತಿಳಿದುಕೊಂಡು ಸುಖವಾಗಿ ಬದುಕುತ್ತವೆ." ಎಂದನು.

ರಾಜನು ಒಂದು ಕ್ಷಣ ಆಲೋಚಿಸಿ, "ನನ್ನ ಚಿಕ್ಕ ಮಗ ಒಳ್ಳೆಯವನೇ, ದೊಡ್ಡವನೂ ಒಳ್ಳೆಯವನೇ! ಅವರನ್ನು ಕುರಿತು ಚಿಂತಿಸುವ ನಾನೇ ಅಸಮರ್ಥನೆಂದಾಯಿತು!" ಎಂದನು.

ಮಂತ್ರಿ ಏನೂ ಹೇಳಲಿಲ್ಲ.





# ಮಹತ್ವದ ಮೂಲಿಕೆ

ಒಂದು ಕಾಲದಲ್ಲಿ ಶ್ರೀಗುಪ್ತನೆಂಬ ಜಮೀನ್ದಾರನಿಗೆ ಹತ್ತು ಗ್ರಾಮಗಳು ಸೇರಿಕೊಂಡಿದ್ದುವು. ಅವನು ಯಾವಾಗಲೂ ಗ್ರಾಮಗಳ ಅಭಿವೃದ್ಧಿಯನ್ನು ಕುರಿತೇ ಆಲೋಚಿಸುತ್ತ, ಏನೋ ಪಥಕ ಹಾಕುತ್ತ, ಅವುಗಳನ್ನು ಅಮಲಿಗೆ ತರುತ್ತಲಿರುವನು. ಅದರಿಂದ ಒಳ್ಳೆಯ ಫಲಿತಗಳಾದರೆ ನೋಡಿ ಸಂತೋಷ ಪಡುವನು. ಆ ಜಮೀನ್ದಾರನಿಗೆ ಜಯಗುಪ್ತನೆಂಬ ಮಗನಿದ್ದನು. ಜಯಗುಪ್ತನು ದೊಡ್ಡವನಾಗಿ ತಂದೆಗೆ ಸಹಾಯಕನಾಗಿ, ತಂದೆಯ ಪದ್ಧತಿಗಳನ್ನು ಅನುಸರಿಸಿ, ತಂದೆಗೆ ಆಲೋಚನೆ ಹೇಳುವವನೂ ಆದನು.

ಈ ಬಗೆಯ ಶ್ರೀಗುಪ್ತನ ಗ್ರಾಮ ಪರಿಪಾಲನೆಯ ಕ್ರಮವನ್ನು ಕುರಿತು ಆ ದೇಶದ ರಾಜನು ಕೇಳಿ ಸಂತೋಷಪಟ್ಟು, ಅವನು ತನ್ನ ಆಸ್ಥಾನಕ್ಕೆ ಬರಬೇಕೆಂದು ಗೌರವಾಹ್ವಾನ ಕಳುಹಿಸಿದನು. ರಾಜನ ಬಳಿಗೆ ಹೋಗುವ ಮೊದಲು ಶ್ರೀಗುಪ್ತನು ತನ್ನ ಮಗನನ್ನು ಕರೆದು. "ರಾಜನಿಂದ ಆಹ್ವಾನ ಬಂದ ಮೇಲೆ ಹೋಗದಿರುವುದು ಒಳ್ಳೆಯದಲ್ಲ. ಅಲ್ಲಿ ನಾನು ಎಷ್ಟು ದಿನ ಇರಬೇಕಾಗುವುದೋ ತಿಳಿಯದು. ನಾನು ಹೋದ ಮೇಲೆ ನಾನು ಇಲ್ಲಿ ಇಲ್ಲದುದರ ಕೊರತೆ ತೋರದ ಹಾಗೆ ನೀನು ನಿನ್ನ ವಿಧಿಗಳನ್ನು ಜಾಗರೂಕತೆಯಿಂದ ನಡೆಯಿಸಿಕೊಂಡಿರಬೇಕು. ಆ ವಿಷಯದಲ್ಲಿ ನಿನಗೆ ಏನಾದರೂ ತೊಂದರೆ ಬಂತೆಂದರೆ ಕೂಡಲೇ ನನಗೆ ಸಮಾಚಾರ ಕಳುಹಿಸು. ಹೊರಟು ಬರುತ್ತೇನೆ" ಎಂದನು.

ರಾಜನಿಂದ ಆಹ್ವಾನಿಸಲ್ಪಟ್ಟ ಶ್ರೀಗುಪ್ತನು ಅವನನ್ನು ಗೌರವದ ಅತಿಥಿಯಾಗಿರಿಸಿಕೊಂಡು ಅವನಿಂದ ಪರಿಪಾಲನೆಯ ವಿಷಯದಲ್ಲಿ ಅನೇಕ ಬಗೆಯ ರಹಸ್ಯಗಳನ್ನು ತಿಳಿದುಕೊಳ್ಳ ತೊಡಗಿದನು. ದಿನಾ ಶ್ರೀಗುಪ್ತನ ಅನುಭವಗಳನ್ನು ಕುರಿತು ಕೇಳುತ್ತ, ರಾಜಕಾರ್ಯಗಳನ್ನು ಚರ್ಚಿಸುತ್ತ ಅವನು ತಿಂಗಳು ಗಟ್ಟಲೆ ತನ್ನ ಅತಿಥಿಯಾಗಿರುವಂತೆ ಮಾಡಿದನು ರಾಜ.

ಆದರೆ ಶ್ರೀಗುಪ್ತನ ಮನಸ್ಸು ಪೂರಾ ತನ್ನ ಗ್ರಾಮಗಳ ಮೇಲೆಯೂ ಅವುಗಳ ನಿರ್ವಹಣೆಯ ಮೇಲೆಯೂ ನಿಂತು ಹೋಗಿದ್ದಿತು. ಕಡೆಗೆ ಅವನು ರಾಜನೊಂದಿಗೆ ಊರಿಗೆ ಹೊರಟು ಹೋಗಲು ಅಪ್ಪಣೆ ಕೊಡಬೇಕೆಂದು ಕೇಳಿದನು. ಅದಕ್ಕೇನೂ ಅಭ್ಯಂತರ ಹೇಳದೆ ರಾಜನು ಅವನನ್ನು ಘನವಾಗಿ ಸತ್ಕರಿಸಿ ರಾಜಮರ್ಯಾದೆಗಳಿಂದ ಕಳುಹಿಸಿಕೊಟ್ಟನು.

ಅರುಣಾ ಶ್ರೀನಿವಾಸ

ಶ್ರೀಗುಪ್ತನು ತನ್ನ ಊರನ್ನು ಸೇರಿಕೊಂಡ ಮೇಲೆ ಒಂದು ವಿಷಯವನ್ನು ತಿಳಿದುಕೊಳ್ಳುವಂತಾಯಿತು. ತಾನು ಗ್ರಾಮದಲ್ಲಿಲ್ಲದೆ ಹೋದುದರಿಂದ ಯಾವ ಕೊರತೆಯೂ ಇರಲಿಲ್ಲ. ತನ್ನ ಮಗನು ಜಮೀನ್ದಾರೀ ಪರಿಪಾಲನೆಯನ್ನು ಒಳ್ಳೆಯ ಸಮರ್ಥತೆಯಿಂದಲೇ ನಿರ್ವಹಿಸುತ್ತಾನೆ. ತಂದೆ ತಿರುಗಿ ಬಂದ ಅನಂತರ ಕೂಡಾ ಜಯಗುಪ್ತನು ಯಾರದೇ ಸಲಹೆಯನ್ನೂ ಆಲೋಚನೆಯನ್ನೂ ಕೇಳದೆಯೇ ಪರಿಪಾಲನೆ ಸಾಗಿಸುತ್ತ ತಾನು ಮಾಡಿದ ಕೆಲಸವನ್ನೂ, ಇನ್ನು ಮೇಲೆ ಮಾಡುವ ಕೆಲಸವನ್ನೂ ತಂದೆಗೆ ಹೇಳ ತೊಡಗಿದನು. ಅದರಲ್ಲಿ ಶ್ರೀಗುಪ್ತನು ತಪ್ಪು ಎಣಿಸುವಂತೆ ಏನೂ ಇರಲಿಲ್ಲ.

ಮುಂದೆ ಬೇಗದಲ್ಲಿ ಶ್ರೀಗುಪ್ತನ ಆರೋಗ್ಯ ಕ್ಷೀಣಿಸುತ್ತಾ ಬರುವುದೆಂದು ಜಯಗುಪ್ತನಿಗೆ ಅನುಮಾನವಾಯಿತು. ಶ್ರೀಗುಪ್ತನು ತನಗೇನೂ ಆಗಿಲ್ಲವೆಂದು ಹೇಳುತ್ತಿದ್ದನು. ಮಗನು ವೈದ್ಯರನ್ನು ಕರೆಯಿಸಿ ತಂದೆಯನ್ನು ಪರೀಕ್ಷೆ ಮಾಡಿಸಿದನು. ಅವರು ನೋಡಿ ಶ್ರೀಗುಪ್ತನಲ್ಲಿ ವಾರ್ಧಕ್ಯಕ್ಕೆ ಸಂಬಂಧಿಸಿದ ಪ್ರಥಮ ಲಕ್ಷಣಗಳ ಹೊರತು ಬೇರೆ ಕಾಯಿಲೆ ಏನೂ ಇಲ್ಲ ಎಂದರು. ಅದರಿಂದ ಜಯಗುಪ್ತನು ತೃಪ್ತನಾಗಲಿಲ್ಲ. ಶ್ರೀಗುಪ್ತನಿಗಿಂತಲೂ ವೃದ್ಧರಾದವರು ಇನ್ನೂ ಕಲ್ಲಿನಹಾಗಿರುವಾಗ, ಶ್ರೀಗುಪ್ತನಿಗೆ ಏನೋ ವ್ಯಾಧಿ ಅಂಟಿದೆ ಎಂದೇ ಜಯಗುಪ್ತನಿಗೆ ತೋರಿತು. ಏನು ಮಾಡಲೂ ತೋರದೆ ಜಯಗುಪ್ತನು ತನ್ನ ತಂದೆಯ ವ್ಯಾಧಿಯನ್ನು ಗುಣಪಡಿಸಿದವರಿಗೆ ಸಾವಿರ ಚಿನ್ನದ ನಾಣ್ಯಗಳನ್ನು ಬಹುಮಾನ ಕೊಡುವೆನೆಂದು ಡಂಗುರ ಹೊಡೆಯಿಸಿ ಪ್ರಕಟಿಸಿದನು.

ಈ ಪ್ರಕಟನೆಯನ್ನು ಕೇಳಿ ಒಬ್ಬ ಯುವಕನು ಬಂದು ಶ್ರೀಗುಪ್ತನನ್ನು ಪರೀಕ್ಷೆಮಾಡಿ, "ನಿಜ. ಇದೊಂದು ವಿಚಿತ್ರವಾದ ವ್ಯಾಧಿ. ಇದರ ಚಿಕಿತ್ಸೆಗೆ ಬೇಕಾದ ಮೂಲಿಕೆ ಹಿಮಾಲಯದ ಬದಿಯಲ್ಲಿ



ಮಾತ್ರ ಬೆಳೆಯುತ್ತದೆ. ಅದನ್ನು ರೋಗಿಯ ಸಂತಾನದವರಾರೋ ಒಬ್ಬರು ಕೈಮುಟ್ಟಿ ಕಿತ್ತು ತರಬೇಕು. ಆಗಷ್ಟೇ ಈ ವ್ಯಾಧಿ ಗುಣವಾಗುತ್ತದೆ" ಎಂದನು.

ತಂದೆ ಅದೇನೂ ಬೇಡವೆಂದು ಎಷ್ಟು ಹೇಳಿದರೂ ಕೇಳದೆ ಜಯಗುಪ್ತನು ಹಿಮಾಲಯಕ್ಕೆ ಪ್ರಯಾಣ ಹೊರಟು, ಆ ಯುವಕನನ್ನೂ ತನ್ನೊಂದಿಗೆ ಬರಲು ಹೇಳಿದನು. ಆ ಮೂಲಿಕೆಯ ಗುರುತು ಹಿಡಿಯಬೇಕಾದವನು ಅವನುತಾನೇ!

ಅಂತೆಯೇ ಆ ಯುವಕನೂ ಜಯಗುಪ್ತನೊಂದಿಗೆ ಹೊರಟನು. ಅವನೊಂದಿಗೆ ದೀರ್ಘ ಪ್ರಯಾಣವನ್ನೇ ಮಾಡಿಸಿದನು. ಆ ಮೂಲಿಕೆ ದೊರೆಯುವ ಪ್ರಾಂತವೆಂದು ಒಂದು ಕಡೆಗೆ ಕರೆದೊಯ್ದನು. ಅನೇಕ ದಿನ ಶ್ರಮಪಟ್ಟು ಆ ಪ್ರಾಂತದಲ್ಲೆಲ್ಲಾ ಗಾಳಿಸಿದರು.

"ನಮಗೆ ಬೇಕಾದ ಮೂಲಿಕೆ ಈಗ ಇಲ್ಲಿ ಇಲ್ಲ. ಇನ್ನೆಲ್ಲಿ ದೊರೆಯುವುದೋ ಏನೋ? ನನಗೆ ಆ ಸಂಗತಿ ತಿಳಿಯದು." ಎಂದನು ಜಯಗುಪ್ತನೊಂದಿಗೆ

ಆ ಯುವಕ. "ಅನುಭವ ಇಲ್ಲದವರೆಲ್ಲ ವೈದ್ಯಮಾಡುವೆನೆಂದು ಹೊರಟರೆ ಹೀಗಾಗದೆ ಇನ್ನೇನಾದೀತು?" ಎಂದನು ಜಯಗುಪ್ತನು ತುಸು ಕೋಪದಿಂದ.

ಯುವಕನು ಯಾವ ಉತ್ತರವನ್ನೂ ಕೊಡಲಿಲ್ಲ. ಉಪಾಯವಿಲ್ಲದೆ ಇಬ್ಬರೂ ಮನೆಗೆ ಹಿಂದಿರುಗಿದರು. ಅವರು ಮನೆ ಸೇರುವಾಗ ಎರಡು ತಿಂಗಳಾಯಿತು. ತನ್ನ ತಂದೆಯ ವ್ಯಾಧಿಯನ್ನು ಕುರಿತು ಅನುಕ್ಷಣವೂ ಚಿಂತಿಸುವ ಜಯಗುಪ್ತನು, ಮನೆಗೆ ಬಂದ ಕೂಡಲೇ ತಂದೆಯನ್ನು ನೋಡಿ ಆಶ್ಚರ್ಯಪಡುತ್ತ ಬೆರಗಾಗಿ ನಿಂತನು. ಶ್ರೀಗುಪ್ತನು ಯಾವ ವ್ಯಾಧಿಯೂ ಇಲ್ಲದೆ ತಿರುಗಾಡುತ್ತ, ಎಲ್ಲಾ ಕೆಲಸಗಳನ್ನೂ ನೋಡಿಕೊಳ್ಳುತ್ತ ತುಂಬಾ ಉತ್ಸಾಹದಲ್ಲಿದ್ದನು. ಜಯಗುಪ್ತನಿಗೆ ತಾನು ಪಟ್ಟ ಶ್ರಮವೆಲ್ಲಾ ಮರೆತು ಹೋಗುವಷ್ಟು ಸಂತೋಷವಾಯಿತು.

ಯುವಕನು ಜಯಗುಪ್ತನನ್ನು ಆಚೆಗೆ ಕರೆದು, "ನನಗೆ ಕೊಡುವೆನೆಂದು ಹೇಳಿದ ಬಹುಮಾನವನ್ನು ಕೊಟ್ಟರೆ, ನಾನು ನನ್ನ ಪಾಡಿಗೆ ಹೊರಟುಹೋಗುತ್ತೇನೆ. ಈಗಲೇ ನಾನು ಬಂದು ಬಹಳ ತಡವಾಯಿತು" ಎಂದನು. ಜಯಗುಪ್ತನಿಗೆ ಕೋಪದಿಂದ ಮೈ ಉರಿಯಿತು. "ಸಾಕು ಬಿಡು ನಿನ್ನ ವೈದ್ಯವೂ ನೀನೂ! ಯಾವುದೋ ಮೂಲಿಕೆ ಇದೆಯೆಂದು ನನ್ನನ್ನು ಎಲ್ಲಿಗೋ ಕರೆದೊಯ್ದು, ನಾನಾ ಹಿಂಸೆಗೊಟ್ಟು ಕಡೆಗೆ ತಾರತಮ್ಯ ತೋರಿಸಿದ್ದು ಸಾಲದೆ ಬಹುಮಾನಕ್ಕೆ ಕೈ ಚಾಚುವೆಯಾ? ನಾಚಿಕೆ ಇಲ್ಲವೇ?" ಎಂದನು ಜಯಗುಪ್ತ.

ಯುವಕನು ಮುಗುಳು ನಗು ಸೂಸುತ್ತ, "ಆ ಮೂಲಿಕೆಯ ಮಹತ್ವದಿಂದಲೇ ನಿಮ್ಮ ತಂದೆಗೆ ಗುಣವಾಗಿ ಎಂದಿನಂತೆ ಆಗಿದ್ದಾರೆ, ನೋಡಿದಿರಷ್ಟೆ? ಅವರನ್ನು ಪೀಡಿಸಿದ ವ್ಯಾಧಿಗೆ ಅಧಿಕಾರ ವಾಂಛೆ ಎಂದು ಹೆಸರು. ಅವರು ರಾಜನ ಅತಿಥಿಯಾಗಿ ಹೋದಾಗ ಅವರು ನಿಮಗೆ ಕೊಟ್ಟ ಹಿರಿತನವನ್ನು ನೀವು ಅವರಿಗೆ ಹಿಂದಿರುಗಿ ಕೊಡಲಿಲ್ಲ. ನಾನು ಮೂಲಿಕೆಯ ನೆಪ ಹೇಳಿ ನಿಮ್ಮನ್ನು ಎರಡು ತಿಂಗಳವರೆಗೆ ದೂರ ಕರೆದುಕೊಂಡು ಹೋದೆ. ಆ ಮೂಲಿಕೆಯನ್ನು ನೀವೇ ಕೀಳಬೇಕೆಂದು ನಾನು ಹೇಳಿದಾಗಲೇ ನನ್ನ ಉಪಾಯವನ್ನು ನೀವು ಗ್ರಹಿಸಬೇಕಿತ್ತು. ನೀವು ಹೋದ ಕೂಡಲೇ ಅವರು ಹಿರಿತನವನ್ನು ಪ್ರಾರಂಭಿಸಿ ಗುಣಮುಖರಾದರು ನೋಡಿದಿರಾ?" ಎಂದನು.

"ನಿನ್ನ ಉಪಾಯ ನಾನು ಗ್ರಹಿಸಿದ್ದರೆ?" ಎಂದು ಜಯಗುಪ್ತನು ಕೇಳಿದನು. "ನಾನೂ ಇದ್ದ ವಿಷಯ ಇದ್ದ ಹಾಗೆ ಹೇಳುತ್ತಿದ್ದೆ. ನಿಮಗೆ ತಿರುಗಾಟ ತಪ್ಪುತಿತ್ತು." ಎಂದ ಯುವಕ.

ಜಯಗುಪ್ತನು ಅವನ ಮಾತಿನ ನಿಜವನ್ನು ಮನದಂದು, ಅವನಿಗೆ ಬಹುಮಾನ ಕೊಟ್ಟು ಕಳುಹಿಸಿದನು.





# ದೇವೀಭಾಗವತ

ವಿಷ್ಣುವಿನ ಆಲೋಚನೆಯನ್ನು ಕೇಳಿ ಬ್ರಹ್ಮನೇ ಮೊದಲಾದ ದೇವತೆಗಳೆಲ್ಲರೂ ಮಹಾದೇವಿಯನ್ನು ಪ್ರಾರ್ಥಿಸುತ್ತ ಕರೆಯತೊಡಗಿದರು. ಅದನ್ನು ಕೇಳಿ ದೇವಿ ಆ ದೇವತೆಗಳೆಲ್ಲರ ಇದಿರಿನಲ್ಲಿ ಪ್ರತ್ಯಕ್ಷಳಾಗಿ ಅಭಯ ಹಸ್ತ ತೋರಿ ನಿಂತಳು.

ದೇವತೆ ಅವಳನ್ನು ತುಂಬಾಸ್ತುತಿಸಿ ಪ್ರಸನ್ನ ಮಾಡಿ, "ಮಹಾದೇವಿಯೇ, ಲೋಕ ರಕ್ಷಕಿಯೇ! ಭೂಮಿಯಲ್ಲಿ ಕಂಸನೇ ಮೊದಲಾದ ದುಷ್ಟ ಶಕ್ತರಿಂದ ವಿಪರೀತ ಭಾರವಾಗಿ ಭೂದೇವಿ ತಾಳಲಾರದೆ ನಮ್ಮ ಮೂಲಕವಾಗಿ ನಿನಗೆ ಶರಣಾಗತಳಾಗಿದ್ದಾಳೆ. ಹರಿ ಹರಾದಿಗಳಿಂದಲೂ ಕೊಲ್ಲಲಾಗದ ರಾಕ್ಷಸರನ್ನು ನೀನು ಕೊಂದಿರುವೆ. ಆದುದರಿಂದ ಈಗಲಾದರೂ ಭೂಭಾರವನ್ನು ತಗ್ಗಿಸಲು ಶಕ್ತಳಾದವಳು ನೀನೇ ತಾಯೇ!" ಎಂದು ಬೇಡಿಕೊಂಡರು.

"ತಾಯೇ! ನಿನ್ನ ಶಕ್ತಿಯ ಸಹಾಯವಿಲ್ಲದೆ ಯಾರಿಂದಲೂ ಏನು ಮಾಡಲಿಕ್ಕೂ ಸಾಧ್ಯವಾಗದು. ಎಲ್ಲರಲ್ಲಿಯೂ ಶಕ್ತಿ ಯಾಗಿರುವವಳು ನೀನೇ. ಬ್ರಹ್ಮನಿಗೆ ಸರಸ್ವತಿಯೂ, ವಿಷ್ಣುವಿಗೆ ಲಕ್ಷ್ಮಿಯೂ, ಶಿವನಿಗೆ ಪಾರ್ವತಿಯೂ ಜತೆ ಯಾಗಿರುವುದರಿಂದಲೇ ಅವರು ತಮ್ಮ ತಮ್ಮ ವಿಧಿಗಳನ್ನು ಸಮರ್ಥತೆಯಿಂದ ಮಾಡಿ ಮುಗಿಸಲು ಶಕ್ತರಾಗುತ್ತಾರೆ. ಇಲ್ಲದಿದ್ದರೆ ತ್ರಿಮೂರ್ತಿಗಳಿಂದ ಕೂಡಾ ಏನುಮಾಡಲೂ ಸಾಧ್ಯವಾಗದು." ಎಂದನು ದೇವೇಂದ್ರ.

"ದೇವೇಂದ್ರನ ಮಾತು ನಿಜವೇ. ನಿನ್ನ ಸಹಕಾರವು ಇಲ್ಲದೇ ಹೋದರೆ ನಾವು ತ್ರಿಮೂರ್ತಿಗಳೂ ಸಹ ಶಕ್ತಿ ಹೀನರೇ, ಯಾರ ಸಹಾಯವೂ ಇಲ್ಲದೆ ಎಲ್ಲದಕ್ಕೂ ಸಮರ್ಥಳಾಗಿರುವವಳು ನೀನೊಬ್ಬಳೇ. ಆದರೆ ನೀನೊಬ್ಬಳೇ ಹೆಸರುಪಡೆಯಲು ಇಷ್ಟವಿಲ್ಲದವಳಾಗಿ, ನಮಗೆಲ್ಲಾ ಅಂತಃ ಸಹಾಯಕಳಾಗಿ ನಮಗೂ ಹೆಸರು ಬರುವಂತೆ ಮಾಡುವಿ. ಇದೇ ನಿನ್ನಲ್ಲಿರುವ ವಿಶೇಷ. ನೀನು ಎಷ್ಟು ಶಕ್ತಳೋ ಅಷ್ಟೇ ಶಾಂತಳೂ ಆಗಿರುವಿಯಮ್ಮಾ!" ಎಂದನು ವಿಷ್ಣು. ಈ ಯಥಾರ್ಥ ಪ್ರಶಂಸೆಗಳಿಂದ ತೃಪ್ತಳಾದ ಜಗದಂಬೆ ಮುಗುಳು ನಗುತ್ತ, "ಈಗ ನನ್ನಿಂದ ನಿಮಗೆ ಯಾವ

## ೧೨. ಕಂಸ



ಬಗೆಯ ಸಹಾಯ ಬೇಕಾಗಿದೆ? ಅದನ್ನು ಸ್ವಲ್ಪ ವಿವರವಾಗಿ ಹೇಳಿರಿ ನೋಡುವಾ" ಎಂದಳು.

"ನೋಡು ತಾಯೇ! ಭೂಮಿಯಲ್ಲಿರುವ ರಾಜರೆಲ್ಲಾ ಪಾಪಾತ್ಮರಾಗಿ ಪ್ರಜೆಗಳನ್ನು ಗೋಳಾಡಿಸುತ್ತಿರುವುದರಿಂದ ಭೂದೇವಿ ತಾಳಲಾರದೆ ಅಳುತ್ತಿದ್ದಾಳೆ. ಅವಳ ಹೊರೆ ಹಗುರಾಗಬೇಕೆಂದು ನಾವೆಲ್ಲಾ ಹಾರೈಸುತಿದ್ದೇವೆ. ನೀನು ಪೂರ್ವದಲ್ಲಿ ವರಬಲದಿಂದ ವಿಜೃಂಭಿಸಿದ, ಮಹಿಷಾಸುರನ ಮದವನ್ನು ಅಡಗಿಸಿದವಳು. ಶುಂಭನಿಶುಂಭರನ್ನು ನಿರ್ಮೂಲಿಸಿದವಳು. ರಕ್ತಬೀಜನನ್ನು ನಿರ್ನಾಮ ಮಾಡಿದವಳು. ಚಂಡ ಮುಂಡಾದಿ ರಾಕ್ಷಸರೂ, ಧೂಮ್ರಲೋಚನನೂ, ದುರ್ಮುಖಿ, ದುಃಸಹ, ಕರಾಳ ಮೊದಲಾದ ರಾಕ್ಷಸರೂ ನೀನು ಕೊಡುವ ಸಹಜ ಶಕ್ತಿಗಳಲ್ಲಿ ತೃಪ್ತಿ ಪಡದೆ, ವರಬಲಗಳಿಂದ ಮದೋನ್ಮತ್ತರಾಗಿ ಅಟ್ಟಹಾಸ ಮಾಡಿದಾಗ, ನಿನ್ನಿಂದಲೇ ಕಡೆಗೆ ಸತ್ತರು. ಈಗ ಕೂಡಾ ಭೂಭಾರವನ್ನು ತೀರಿಸಿ ಭೂದೇವಿಯ ದುಃಖವನ್ನೂ ಆ ಮೂಲಕ ನಮ್ಮೆಲ್ಲರನ್ನೂ ಅನುಗ್ರಹಿಸು." ಎಂದು ಪ್ರಾರ್ಥಿಸಿಕೊಂಡರು ದೇವತೆಗಳು.

ಆ ಮಾತುಗಳನ್ನು ಕೇಳಿ ಮಹಾದೇವಿ ನಕ್ಕು, "ಹೌದು. ನಾನುಕೂಡಾ ಅದನ್ನು ಕುರಿತು ಆಲೋಚಿಸಿದ್ದೇನೆ. ಜರಾಸಂಧನೇ ಮೊದಲಾದ ದುರ್ವಿದಗ್ಧರನ್ನು ನಿರ್ಮೂಲಿಸಬೇಕೆಂದು ಮೊದಲೇ ನಿರ್ಣಯಿಸಿದ್ದೇನೆ. ಅದೆಲ್ಲಾ ತುಂಬಿ ಬರುವ ಹಾಗೆ ಕಾಲ ಕೂಡಿಬರಬೇಕಿತ್ತು. ಅದೀಗ ಬರುತ್ತಿದೆ. ನೀವು ದೇವತೆಗಳೆಲ್ಲಾ ನಿಮ್ಮ ನಿಮ್ಮ ಅಂಶಗಳಿಂದ ಭೂಮಿಯಲ್ಲಿ ಹುಟ್ಟಿರಿ. ಕಶ್ಯಪನು ಯಾದವಕುಲದಲ್ಲಿ ವಸುದೇವನಾಗಿ ಹುಟ್ಟಿದ್ದಾನೆ. ಭೃಗುವಿನಶಾಪ ಪಡೆದಿರುವ ವಿಷ್ಣು ಆ ವಸುದೇವನಿಗೆ ಮಗನಾಗಿ ಹುಟ್ಟುತ್ತಾನೆ. ನಾನು ನಂದಗೋಪನ ಮಗಳಾಗಿ ಹುಟ್ಟುತ್ತೇನೆ. ನಂದನಿಗೂ ಯಶೋದೆಗೂ ನಾನು ಮಗಳಾಗಿ ಹುಟ್ಟಿ ಮಾಡಬೇಕಾದ ಕೆಲಸಗಳನ್ನು ಸಂತೋಷದಿಂದ ಮಾಡುತ್ತೇನೆ. ನಿರ್ಬಂಧದಲ್ಲಿ ಹುಟ್ಟಿದ ವಿಷ್ಣುವನ್ನು ಗೋಕುಲಕ್ಕೆ ಕಳುಹಿಸುತ್ತೇನೆ. ದೇವಕಿಯ ಗರ್ಭದಲ್ಲಿದ್ದ ಶೇಷನನ್ನು ರೋಹಿಣೀ ದೇವಿಯ ಗರ್ಭಕ್ಕೆ ಬದಲಾಯಿಸುತ್ತೇನೆ. ನನ್ನ ಶಕ್ತಿಯುಕ್ತಿಗಳ ಸಹಾಯದಿಂದ ಬಲರಾಮಕೃಷ್ಣರಿಬ್ಬರೂ ದುಷ್ಟರಾದ ರಾಕ್ಷಸರನ್ನೆಲ್ಲಾ ದ್ವಾಪರಯುಗಾಂತದಲ್ಲಿ ಕೊಂದು ತೀರಿಸುತ್ತಾರೆ. ಇಂದ್ರನ ಅಂಶದಲ್ಲಿ ಹುಟ್ಟಿದ ಅರ್ಜುನನು ರಾಜರನ್ನೆಲ್ಲಾ ಕೊಲ್ಲುತ್ತಾನೆ. ಯಮನ ಅಂಶದವನಾದ ಧರ್ಮರಾಜನೂ, ವಾಯುವಿನ ಅಂಶದ ಭೀಮನೂ, ಅಶ್ವಿನೀ ದೇವತೆಗಳ ಅಂಶದ ನಕುಲ ಸಹದೇವರೂ, ವಸುವಿನ ಅಂಶದಲ್ಲಿ ಹುಟ್ಟಿದ ಭೀಷ್ಮನೂ ಬೇಕಾದಷ್ಟು ದುಷ್ಟರನ್ನು ಸಂಹಾರ ಮಾಡುತ್ತಾರೆ. ನಿಮ್ಮನ್ನೆಲ್ಲಾ ಸಾಧನಗಳನ್ನಾಗಿಟ್ಟುಕೊಂಡು ಮಾಡಬೇಕಾದುದನ್ನೆಲ್ಲಾ ನಾನು ಮಾಡಿ ಮುಗಿಸುತ್ತೇನೆ. ಇನ್ನು ನೀವೆಲ್ಲ ನಿಮ್ಮ ನಿಮ್ಮ ಸ್ಥಾನ

ಗಳಿಗೆ ಹೋಗಿ, ನಾನು ಹೇಳಿದಂತೆ ಕಾರ್ಯೋನ್ಮುಖಿರಾಗಿರಿ. ಚಿಂತಿಸ ಬೇಡಿರಿ " ಎಂದು ಹೇಳಿ ಅಂತರ್ಧಾನಳಾದಳು. ಎಲ್ಲರೂ ನೆಮ್ಮದಿಯಿಂದ ಹಿಂದಿರುಗಿದರು.

ಕಾಳಿಂದೀ ನದಿಯ ತೀರದಲ್ಲಿ ಎತ್ತರವಾದ ಮರಗಳಿಂದ ಕೂಡಿದ ಸುಂದರವಾದ ಮಧುವನವು ಭೂಮಿಯಲ್ಲಿದ್ದಿತು. ಅಲ್ಲಿ ಲವಣಾಸುರನೆಂಬ ರಾಕ್ಷಸನು ಪರಮ ದುರ್ಮಾರ್ಗಿಯಾಗಿದ್ದನು. ಅವನ ತಂದೆಯ ಹೆಸರು ಮಧು. ಬ್ರಾಹ್ಮಣರನ್ನೂ, ಸಾಧುಗಳನ್ನೂ ಋಷಿಗಳನ್ನೂ ಕಾಡುತ್ತಿದ್ದ ಲವಣಾಸುರನನ್ನು ಶತ್ರುಘ್ನನೆಂಬವನು ಕೊಂದು, ಆ ವನದಲ್ಲಿ ಒಂದು ನಗರವನ್ನೇ ನಿರ್ಮಿಸಿದನು. ಅದುವೇ ಮಧುರಾ ನಗರ.

ಆದರೆ ಶತ್ರುಘ್ನನ ವಂಶದವರು ಅದನ್ನು ಬಹಳಕಾಲ ಪಾಲಿಸಲಿಲ್ಲ. ಮಧುರಾ ನಗರವು ಯದುವಂಶದ ರಾಜರ ವಶವಾಯಿತು. ಅದನ್ನು ಯಯಾತಿಯ ಮಗನಾದ ಶೂರಸೇನನು ಪಾಲಿಸಿಕೊಂಡಿದ್ದನು. ವರುಣದೇವನ ಶಾಪವನ್ನು ಪಡೆದ ಕಶ್ಯಪನು ಅವನಿಗೆ ಹುಟ್ಟಿ ವಸುದೇವನೆಂಬ ಹೆಸರಿನಿಂದ ಬೆಳೆದನು. ಅದಿತಿ ದೇವಕಿ ಎಂಬ ಹೆಸರಿನಲ್ಲಿ ವಸುದೇವನಿಗೆ ಹೆಂಡತಿಯಾಗಿ ಹೊಂದಿಕೊಂಡಳು. ಆದರೆ ವಸುದೇವನು ವೈಶ್ಯ ವೃತ್ತಿಯನ್ನು ಅವಲಂಬಿಸಿದುದರಿಂದ, ಮಧುವಂಶದಲ್ಲಿ ಹುಟ್ಟಿದ ಉಗ್ರಸೇನನು ಮಧುರಾಪುರವನ್ನು ಪಾಲಿಸಿಕೊಂಡು ಬಂದನು. ಅವನ ಮಗನೇ ಕಂಸ. ದೇವಕನೆಂಬವನಿಗೆ ಮಗಳಾಗಿ ಹುಟ್ಟಿದವಳು ದೇವಕಿ.

ದೇವಕನು ದೇವಕಿಯನ್ನು ವಸುದೇವನಿಗೆ ಕೊಟ್ಟು ಮದುವೆ ಮಾಡುವಾಗ ಒಂದು ಅದ್ಭುತ ಸಂಭವವಾಯಿತು, ಮದುವೆಯ ಮೆರವಣಿಗೆಯ ಗದ್ದಲದ ನಡುವೆ, ಆಕಾಶವಾಣಿಯೊಂದು ಈ ರೀತಿಯಾಗಿ ಮೊಳಗಿತು : "ಎಲೋ ಕಂಸಾ ! ಈ ದೇವಕಿಯ ಮಗಂದಿರಲ್ಲಿ ಎಂಟನೇಯವನು ನಿನ್ನನ್ನು ಕೊಲ್ಲು



ತ್ತಾನೆ ! " ಈ ಶಬ್ದವನ್ನು ಕೇಳಿ ಕಂಸನಿಗೆ ದಿಗಿಲು ಬಡೆಯಿತು. ಅದನ್ನು ತಪ್ಪಿಸಿಕೊಳ್ಳಲು ದೇವಕಿಯನ್ನು ಕೊಂದುಬಿಡುವುದೇ ಸರಿಯಾದ ದಾರಿಯೆಂದು ಮೊದಲು ತೋರಿತು.

ಆದರೆ ತಂಗಿಯಂತೆ ಸನ್ಮಾನಿಸಲ್ಪಡ ಬೇಕಾದವಳನ್ನು, ಉತ್ತಮ ಗುಣಸಂಪನ್ನೆಯಾದವಳನ್ನು ಹೇಗೆ ತಾನೇ ಕೊಲ್ಲಲಿ, ಎಂದು ಅವನ ಮನಸ್ಸು ಸಂಕಟದಿಂದ ಹೊರಳ ತೊಡಗಿತು. ಏನಾದರೂ ದೇವಕಿಯನ್ನು ಕೊಲ್ಲದೆ ಉಪಾಯವಿಲ್ಲವೆಂದೇ ಎಣಿಸಿದನು. ತಾನು ಬದುಕಿದ್ದರೆ ಎಂತಹ ಪಾಪಕ್ಕಾದರೂ ಪ್ರಾಯಶ್ಚಿತ್ತಮಾಡಿಕೊಳ್ಳಬಹುದು. ಸತ್ತರೆ ಏನಿದೆ ? ಆದುದರಿಂದ ಪ್ರಾಣ ಉಳಿಸಿಕೊಳ್ಳಲು ಎಂತಹ ಪಾಪವನ್ನಾದರೂ ಮಾಡಬಹುದು.

ಹೀಗೆ ನಿಶ್ಚಯಿಸಿಕೊಂಡು ಕಂಸನು ಎಲ್ಲರೂ ನೋಡುತ್ತಿದ್ದಂತೆ ಕತ್ತಿಯನ್ನೆತ್ತಿ ಮದುಮಗಳಾಗಿದ್ದ



ದೇವಕಿಯ ತಲೆ ಮುಡಿಯನ್ನು ಇನ್ನೊಂದು ಕೈಯಲ್ಲಿ ಹಿಡಿದನು. ಆ ಕ್ಷಣಗಳಲ್ಲಿ ಅವಳು ತನ್ನ ತಂಗಿಯೆಂದೂ, ಯಾವ ಪಾಪವನ್ನೂ ಅರಿಯದವಳೆಂದೂ ಆ ಕಠಿಣಾತ್ಮನಿಗೆ ತೋರಲೇ ಇಲ್ಲ.

ಆಗ ಥಕ್ಕನೆ ವಸುದೇವನು ಅಡ್ಡಬಾರದೆ ಹೋಗಿರುತ್ತಿದ್ದರೆ ದೇವಕಿಯ ತಲೆ ಕೆಳಗೆ ಬೀಳುತ್ತಿತ್ತು. ವಸುದೇವನ ಬೆನ್ನಿಗೆ ಯಾದವ ವೀರರೆಲ್ಲರೂ ಒಂದಾಗಿ ನಿಂತು, "ಎಲೋ ದುರಾತ್ಮಾ! ಕಂಸಾ! ಎಂಥಾ ಹೀನ ಕಾರ್ಯಕ್ಕೆ ಸಿದ್ಧನಾದೆಯೋ!" ಎಂದು ಕಂಸನನ್ನು ನಿಂದಿಸಿ ಹೋರಾಡಲು ತಯಾರಾದರು. ಕಂಸನು ದೇವಕಿಯನ್ನು ಬಿಟ್ಟು, ಅವರನ್ನು ಇದಿರಿಸ ಬೇಕಾಗಿ ಬಂದಿತು.

ಆಗ ವೃದ್ಧರು ಮಧ್ಯೆ ನಿಂತು ಅಶುಭಕರವಾದ ಹೊಡೆದಾಟವಾಗದಂತೆ ತಡೆದು ಕಂಸನೊಂದಿಗೆ, "ನೋಡಪ್ಪ! ಇವಳನ್ನು ನೋಡು! ಮುದ್ದಿನ ಮದುವೇ ಮಗಳು! ಉತ್ತಮ ಗುಣದವಳು! ನಿನ್ನ ಪ್ರೀತಿಯ ತಂಗಿ! ಇವಳನ್ನು ಕೊಲ್ಲಲು ಕೈಯಾದರೂ ನಿನಗೆ ಹೇಗೆ ಬಂತಪ್ಪಾ! ಯಾವನೋ ಒಬ್ಬ ಅಸತ್ಯವಾದಿ ವಸುದೇವನ ಮನೆ ಮುಳುಗಿಸಬೇಕೆಂಬ ದುರ್ಬುದ್ಧಿಯಿಂದ ನಿನಗೆ ಅಪಖ್ಯಾತಿ ತರಲು ಏನೋ ಗಾರುಡಿ ಮಾಡಿದನೇ ಹೊರತು, ಅದನ್ನು ನಿಜವಾದ ದೈವವಾಣಿ ಎಂದು ನಂಬುವಿಯಾ? ಬುದ್ಧಿವಂತರು ಇಂತಹ ಇಂದ್ರಜಾಲವನ್ನು ಲೆಕ್ಕಿಸುವರೇನು? ಹೋಗಲಿ, ಅದು ನಿಜವಾದ ಅಶರೀರವಾಣಿಯೆಂದೇ ಅಂದುಕೊಳ್ಳುವ. ನಡೆಯಲೇ ಬೇಕಾಗಿ ಬರುವ ವಿಧಿಯನ್ನು ನೀನು ತಪ್ಪಿಸಿಬಿಡಬಲ್ಲೆಯಾ?" ಎಂದರು.

ಆಗ ವಸುದೇವನು ಹೀಗೆಂದನು: "ಕಂಸಬಾವಾ, ನಿನಗೆ ಯಾವ ಭಯವೂ ಬೇಡ. ಇಷ್ಟುಮಂದಿಗಳ ಇದಿರಿನಲ್ಲಿ ಪ್ರಮಾಣಮಾಡಿ ಹೇಳುತ್ತೇನೆ. ದೇವಕಿಗೆ ಹುಟ್ಟಿದ ಮಕ್ಕಳನ್ನೆಲ್ಲಾ ನಿನಗೆ ಕೊಟ್ಟುಬಿಡುತ್ತೇನೆ. ಅವುಗಳನ್ನು ಬೇಕಾದರೆ ಕೊಲ್ಲು. ಈ ಮಾತನ್ನು ನಾನು ತಪ್ಪಿದ ಪಕ್ಷದಲ್ಲಿ ನನ್ನ ಪೂರ್ವಿಕರು ನರಕಕ್ಕೆ ಹೋಗುತ್ತಾರೆ."

ವಸುದೇವನು ಸೂರ್ಯಚಂದ್ರರು ತಲೆ ಕೆಳಗಾದರೂ ಆಡಿದ ಮಾತು ತಪ್ಪುವವನಲ್ಲವೆಂದು ಎಲ್ಲರೂ ಕಂಸನಿಗೆ ಒತ್ತಿ ಹೇಳಿದರು. ಕಂಸನು ವಸುದೇವನ ಮಾತನ್ನು ನಂಬಿ ತನ್ನ ಹಟವನ್ನು ಬಿಟ್ಟುಕೊಟ್ಟನು. ಎಲ್ಲರಿಗೂ ದೊಡ್ಡ ಗಂಡ ತಪ್ಪಿದಂತಾಯಿತು. ಅನಂತರ ವಸುದೇವನು ದೇವಕಿಯೊಂದಿಗೆ ತನ್ನ ಮನೆಯಲ್ಲಿ ಸುಖವಾಗಿದ್ದನು.

ಸ್ವಲ್ಪಕಾಲದ ಮೇಲೆ ದೇವಕಿ ಗರ್ಭಿಣಿಯಾಗಿ ಸುಂದರವಾದ ಮಗನನ್ನು ಹಡೆದಳು. ಆಗ ವಸುದೇವನು ದೇವಕಿಯೊಂದಿಗೆ, "ಈ ಹುಡುಗನ ಆಶೆ ಬಿಡು. ಇವನನ್ನು ಒಯ್ದು ಕಂಸನಿಗೆ ಕೊಟ್ಟುಬಿಡುತ್ತೇನೆ. ನೀನು ದುಃಖಿಸಬಾರದು. ಪ್ರಾರಬ್ಧವನ್ನು ಮೀರಲು ಯಾರಿಗೂ ಸಾಧ್ಯವಿಲ್ಲ" ಎಂದನು. ಅದಕ್ಕೆ ದೇವಕಿ, "ಪ್ರಾರಬ್ಧಕ್ಕೆ ಪರಿಹಾರವಿಲ್ಲ

ದಿದ್ದೀತೆ? ಮಾಡಿದ ಪಾಪಗಳು ಹೋಗಿ ಸ್ವರ್ಗ ಸಿಗಬೇಕಾದರೆ ತೀರ್ಥಯಾತ್ರೆ ಮಾಡಬೇಕೆಂದು ಹಿರಿಯರು ಹೇಳುವುದಿಲ್ಲವೆ? ಬ್ರಹ್ಮಹತ್ಯದಂಥಾ ಪಾಪಕ್ಕೂ ಪ್ರಾಯಶ್ಚಿತ್ತ ಹೇಳಿದ್ದಾರೆ. ಮನು ಮೊದಲಾದ ಶಾಸ್ತ್ರಕಾರರು ಹೇಳಿದ್ದೆಲ್ಲಾ ಸುಳ್ಳೆಂದು ಹೇಳುವಿರೇನು? ನಡೆಯುವಂಥಾದ್ದು ನಡೆದೇ ತೀರುತ್ತದೆನ್ನುವುದರಲ್ಲಿ ವಿವೇಕವೇನೂ ಇಲ್ಲ. ಮಾಡಿದ ಕೆಲಸಗಳಿಗೆ ಫಲ ಸಿಗುವುದನ್ನು ಸ್ಪಷ್ಟ ವಾಗಿಯೇ ಕಾಣುತ್ತೇವೆ. ಹಾಗಿಲ್ಲದ ಪಕ್ಷದಲ್ಲಿ ವೇದ ಗಳೇಕೆ? ಯಜ್ಞಗಳೇಕೆ? ಮಹಾಮುನಿಗಳೇಕೆ? ಅಮೂಲ್ಯವಾದ ಔಷಧಗಳೇಕೆ? ಎಲ್ಲವೂ ಸುಳ್ಳೇ ಅಲ್ಲವೆ? ಆದ್ದರಿಂದ ಈಗ ಏನಾದರೂ ಉಪಾಯ ವನ್ನು ಆಲೋಚಿಸಿರಿ. ಸ್ವಲ್ಪ ವಿವೇಕಕ್ಕೆ ಎಡೆ ಕೊಡಿರಿ." ಎಂದಳು.

ಅವಳ ಮಾತನ್ನು ವಸುದೇವನು ಒಪ್ಪಲಿಲ್ಲ. "ಪ್ರಯತ್ನ ಮಾಡಬೇಕೆಂಬುದೇನೋ ನಿಜವೇ. ಆದರೆ ಕೇವಲ ಪ್ರಯತ್ನದಿಂದಲೇ ಫಲ ಬಂದು ಬಿಡುವುದಿಲ್ಲ. ದೈವ ಬಲವಿರುವ ಪ್ರಯತ್ನಗಳಷ್ಟೇ ಫಲ ಕೊಡು ತ್ತವೆ. ವರ್ತಮಾನ ಕಾಲದಲ್ಲಿ ಮಾಡಿದುವುಗಳಿಗೆ ಮಾತ್ರ ಪ್ರಾಯಶ್ಚಿತ್ತವಿದೆಯೇ ಹೊರತು ಪೂರ್ವ ಜನ್ಮ ಪ್ರಾರಬ್ಧಗಳಿಗೆ ಪ್ರಾಯಶ್ಚಿತ್ತವಿಲ್ಲ. ಸಾರವಿಲ್ಲದ ಈ ಜೀವಿತಕಾಲದಲ್ಲಿ ಸತ್ಯವೊಂದೇ ಸಾರವಾದುದು. ವಿವೇಕಿಗಳಾದವರು ಸತ್ಯವನ್ನು ಬಿಡುವುದುಂಟೆ? ಸತ್ಯಕ್ಕಾಗಿ ಸುಖ ದುಃಖಗಳನ್ನು ಲಕ್ಷ್ಯ ಮಾಡದಿದ್ದ ವರಿಗೇ ಶುಭವುಂಟಾಗುತ್ತದೆ. ಆದುದರಿಂದ ಈ ಮಗುವನ್ನು ಕಂಸನಿಗೆ ಕೊಡಲು ಒಪ್ಪಿಕೋ. ನಾನು ವಚನಭ್ರಷ್ಟನಾಗುವುದು ನಿನಗೂ ಒಳಿತಲ್ಲ" ಎಂದನು ವಸುದೇವ.

ದೇವಕಿ ಮರು ಮಾತಾಡದೆ ಅಳುತ್ತಾ ತನ್ನ ಮಗುವನ್ನು ತಾನೇ ಎತ್ತಿ ಗಂಡನ ಕೈಗೆ ಕೊಟ್ಟಳು. ತನ್ನ ಮಾತನ್ನು ಉಳಿಸಿಕೊಳ್ಳುವವನಾಗಿ ಮಗುವನ್ನೆತ್ತಿ ಕೊಂಡು ಕಂಸನ ಬಳಿಗೆ ಹೋಗುವ ವಸುದೇವನನ್ನು ನೋಡಿ ಎಲ್ಲರೂ ಮೆಚ್ಚಿಕೊಂಡರು. ಇನ್ನೂ ಹಸಿ ಯಾರದ ತನ್ನ ಎಳೆ ಕಂದನನ್ನು ತಂದು ತನಗೆ ಸಮರ್ಪಿ





ಸಿದ ವಸುದೇವನನ್ನು ನೋಡಿ ಕಂಸನೂ ಮೆಚ್ಚಿದನು. "ಹೌದು, ನನ್ನನ್ನು ಕೊಲ್ಲುವುದು ದೇವಕಿಯ ಎಂಟನೇ ಗರ್ಭದಲ್ಲಿ ಹುಟ್ಟುವವನು ತಾನೆ? ಸುಮ್ಮನೆ ಇವನನ್ನೇಕೆ ಕೊಲ್ಲಲಿ? ತೆಗೆದುಕೊಂಡು ಹೋಗಿ ನೀವೇ ಬೆಳೆಸಿಕೊಳ್ಳಿ" ಎಂದನು ಕಂಸ. ವಸುದೇವನು ಮಗುವಿನೊಂದಿಗೆ ಹಿಂದಿರುಗಿದನು.

ಕಂಸನು ತಾನು ಮಾಡಿದ ಕೆಲಸವನ್ನು ಕುರಿತು ತನ್ನ ಮಂತ್ರಿಗಳೊಂದಿಗೆ ಹೇಳಲು, ಅವರು ಕೂಡಾ ಕಂಸನನ್ನು ಮೆಚ್ಚಿಕೊಂಡರು. ಆದರೆ ಕಂಸನ ಕಾರ್ಯವನ್ನು ಹೀಯಾಳಿಸುವವನಾಗಿ ನಾರದನು ಅಕಸ್ಮಾತ್ತಾಗಿ ಕಂಸನ ಬಳಿಗೆ ಬಂದನು. ಅರ್ಘ್ಯ ಪಾದ್ಯಾದಿ ಉಪಚಾರಗಳೆಲ್ಲ ಆದ ಮೇಲೆ ನಾರದನು ಕಂಸನನ್ನು ನೋಡಿ, "ಎಲೋ ಹುಚ್ಚನೇ! ದೇವಕಿ ಹೆತ್ತ ಮಗುವನ್ನು ಕೊಲ್ಲದೆ ಬಿಟ್ಟು ಬಿಟ್ಟೆಯಲ್ಲಾ! ಎಂತಹ ಬುದ್ಧಿ ಹೀನನು ನೀನು? ನಿನ್ನನ್ನು ಕೊಲ್ಲಿ ಸಲಿಕ್ಕಾಗಿ ವಿಷ್ಣುವೇ ದೇವಕಿಯ ಗರ್ಭದಲ್ಲಿ ಹುಟ್ಟುವ ಹಾಗೆ ದೇವತೆಗಳು ಪಥಕ ಹಾಕುವುದನ್ನು ನಾನು ಸ್ವಯಂ ಕೇಳಿದೆನು ಗೊತ್ತಾ?" ಎಂದನು.

"ನನಗೆ ಮರಣವು ಅವಳ ಅಷ್ಟಮ ಗರ್ಭದಿಂದ ಎಂದು ಆಕಾಶವಾಣಿ ಹೇಳಿದೆ. ಹಾಗಿರುವಾಗ ಮೊದಲನೇ ಮಗುವನ್ನೇ ಕೊಲ್ಲಬೇಕೇ?" ಎಂದು ಕಂಸನು ಕೇಳಿದನು.

"ನಿನಗೆ ದೇವತೆಗಳ ಮಾಯವು ಗೊತ್ತಾಗುವುದಿಲ್ಲ. ನಿನಗೆ ಮೃತ್ಯುವಾಗುವುದು ದೇವಕಿಯ ಎಂಟನೇ ಸಂತಾನವಾದರೂ ಆ ಅಷ್ಟಮದವನಿಗೆ ಉಳಿಯುವ ಏಳು ಮಂದಿ ಅಣ್ಣಂದಿರ ಸಹಾಯ ವಿದ್ದರೆ ನಿನಗೆ ಮತ್ತಷ್ಟು ಕಷ್ಟವಲ್ಲವೆ? ಅವರೆಲ್ಲಾ ಕೂಡಿ ಎಂಟನೇಯವನನ್ನು ಕೊಲ್ಲಲಾಗದಂತೆ ನಿನ್ನನ್ನು ತಡೆಯಬಹುದಲ್ಲವೆ? ಆಗ ನಿನ್ನ ಗತಿ ಏನಾದೀತೋ ಹೇಳಲು ಸಾಧ್ಯವೇ?" ಎಂದ ನಾರದ.

ಕಂಸನಿಗೆ ನಾರದನ ಮಾತು ನಾಟಿತು. ನಾರದನು ಹೊರಟು ಹೋದ ಕೂಡಲೇ ಕಂಸನು ದೇವಕಿ ಹಡೆದ ಮಗುವನ್ನು ತರಿಸಿ ಕಲ್ಲಿಗೆ ಹೊಡೆದು ಕೊಂದು ಹಾಕಿಬಿಟ್ಟನು.

ಹೀಗೆ ನಾರದನು ತಾನಾಗಿಬಂದು ದೇವಕಿ ಹೆತ್ತ ಮಕ್ಕಳನ್ನು ಕಂಸನಿಂದ ಕೊಲ್ಲಿಸಲಿಕ್ಕೆ ಮುಖ್ಯವಾದ ಕಾರಣವಿದ್ದಿತು. ಅದೇನೆಂದರೆ, ಸ್ವಾಯಂಭು ಮನ್ವಂತರದಲ್ಲಿ ಮರೀಚಿಗೆ ಊರ್ಣಾದೇವಿ ಹೆಂಡತಿಯಾಗಿದ್ದಳು. ಅವಳು ಆರು ಮಂದಿ ಮಕ್ಕಳನ್ನು ಹೆಡೆದಳು. ಆ ಮಕ್ಕಳು ಒಂದುಸಾರಿ ಬ್ರಹ್ಮನನ್ನು ನೋಡಿ, ಮಗಳಿಗೇ ಗಂಡನಾದವನೆಂದು ಹೇಳಿ ನಗುತ್ತ ಹಾಸ್ಯಮಾಡಿದರು.

ಬ್ರಹ್ಮನಿಗೆ ಕೋಪಬಂದು ಅವರನ್ನು ರಾಕ್ಷಸ ಜನ್ಮ ಎತ್ತುವಂತೆ ಶಪಿಸಿದನು. ಆ ಶಾಪದಿಂದ ಅವರು ಒಂದು ಜನ್ಮದಲ್ಲಿ ಕಾಲನೇಮಿಗೆ ಪುತ್ರರಾಗಿ ಹುಟ್ಟಿ, ಎರಡನೇ ಜನ್ಮದಲ್ಲಿ ಹಿರಣ್ಯಕಶಿಪುವಿಗೆ ಪುತ್ರರಾಗಿ ಹುಟ್ಟಿದರು.

ಪದೇ ಪದೇ ರಾಕ್ಷಸ ಜನ್ಮ ಬರುವುದನ್ನು ನೋಡಿ ಅವರು ಶಾಪವಿಮೋಚನೆಗಾಗಿ ಬ್ರಹ್ಮನನ್ನು ಕುರಿತು ತಪಸ್ಸಿಗೆ ಕುಳಿತರು. ಬ್ರಹ್ಮನು ಪ್ರತ್ಯಕ್ಷನಾಗಿ, " ಆಗ ನಿಮ್ಮ ಹುಡುಗಾಟದ ತಪ್ಪಿಗೆ ಕೋಪಬಂದು ಶಪಿಸಿದೆ. ಈಗ ನಿಮಗೆ ವರ ಕೊಡುತ್ತೇನೆ. ಏನು ಬೇಕೋ ಕೇಳಿರಿ " ಎಂದನು.

ಆರು ಮಂದಿಗಳೂ ತಪಸ್ಸಿಗೆ ಕುಳಿತ ಉದ್ದೇಶವನ್ನು ಮರೆತು, ಬ್ರಹ್ಮನೊಂದಿಗೆ, " ದೇವಾ ! ನಿನಗೆ ವರ ಕೊಡುವ ಮನಸ್ಸಿದ್ದರೆ, ನಮಗೆ ದೇವತೆಗಳಿಂದಾಗಲಿ, ರಾಕ್ಷಸರಿಂದಾಗಲಿ, ಮಾನವರಿಂದಾಗಲಿ ಸಾವು ಬಾರದಂತೆ ವರಕೊಡು. ನಾವು ಸ್ಥಿರವಾಗಿ ಬದುಕಿರುತ್ತೇವೆ " ಎಂದು ಕೇಳಿದರು. ಬ್ರಹ್ಮನು "ತಥಾಸ್ತು" ಎಂದು ಹೇಳಿ ಅಂತರ್ಧಾನನಾದನು.

ಇದನ್ನು ತಿಳಿದು ಅವರ ತಂದೆಯಾದ ಹಿರಣ್ಯಕಶಿಪುವಿಗೆ ಕೋಪಬಂದಿತು. ತನ್ನನ್ನು ಸ್ವಲ್ಪವೂ ಲಕ್ಷ್ಯಮಾಡದೆ ಬ್ರಹ್ಮದೇವನಿಂದ ವರ ಪಡೆದ ಪುತ್ರರ ಮೇಲೆ ರುಷ್ಟನಾದ ಹಿರಣ್ಯಕಶಿಪು, ಅವರನ್ನು ತನ್ನ ಬಳಿಯಿಂದ ಹೊರಡಿಸುತ್ತ, " ನೀವು ಪಾತಾಳಕ್ಕೆ ಹೋಗಿ ರಾತ್ರೀ ಹಗಲೂ ನಿದ್ರೆಯಿಲ್ಲೇ ಇದ್ದು ಅನ್ನ ನೀರುಬಿಟ್ಟು ಸತ್ತು, ಆ ಮೇಲೆ ದೇವಕಿಯ ಗರ್ಭದಲ್ಲಿ ಹುಟ್ಟಿರಿ. ಹಿಂದಿನ ಜನ್ಮದ ನಿಮ್ಮ ತಂದೆ ಕಾಲನೇಮಿಯೇ ಕಂಸನಾಗಿ ಹುಟ್ಟಿ, ನಿಮ್ಮನ್ನು ಹುಟ್ಟಿದ ಕೂಡಲೇ ಕೊಲ್ಲುತ್ತಾನೆ. ನನ್ನನ್ನು ಅಲಕ್ಷ್ಯ ಮಾಡಿದ್ದಕ್ಕೆ ಬ್ರಹ್ಮ ವರ ಪಡೆದ ನಾನು ಕೊಡುವ ಶಾಪ ನಿಮಗಿದು !" ಎಂದನು.

ಹೀಗೇ ಹಿರಣ್ಯಕಶಿಪುವಿನ ಶಾಪದಿಂದ ಆ ಆರು ಮಂದಿಗಳೂ ಆ ಜನ್ಮದಿಂದ ಮುಕ್ತರಾಗಿ, ದೇವಕಿಯ ಗರ್ಭದಲ್ಲಿ ಹುಟ್ಟಿ, ಆ ಕೂಡಲೇ ಕಂಸನ ಕೈಯಿಂದ ಸತ್ತು ಮುಕ್ತರಾದರು. ಕಡೆಗೆ ದೇವಕಿ ಏಳನೇ ಸಾರಿ ಗರ್ಭಿಣಿಯಾದಳು. ಆದರೆ ಐದನೇ ತಿಂಗಳಿನಲ್ಲಿ ಅವಳ ಗರ್ಭವು ಹೋಯಿತೆಂದು ಸುದ್ದಿ ಹುಟ್ಟಿತು. ಅದನ್ನು ಕೇಳಿ ಕಂಸನು ಬಹಳ ಸಂತೋಷ ಪಟ್ಟನು.

ಆದರೆ ನಿಜಕ್ಕೂ ನಡೆದುದೇನಂದರೆ, ಮಹಾದೇವಿಯಾದ ಯೋಗಮಾಯೆ ದೇವಕಿಯ ಗರ್ಭವನ್ನು ರೋಹಿಣಿಯ ಗರ್ಭದೊಳಗೆ ಬದಲಾಯಿಸಿದ್ದಳು. ಅಂತೆಯೇ ಸ್ವಲ್ಪ ಕಾಲದಲ್ಲೇ ಗೋಕುಲದಲ್ಲಿದ್ದ ರೋಹಿಣಿ ಗಂಡು ಶಿಶುವನ್ನು ಹೆತ್ತಳು. ಅವನೇ ಬಲರಾಮ.

ಎಂಟನೇ ಸಾರಿ ದೇವಕಿ ಗರ್ಭಿಣಿಯಾದಳು. ಈ ಸಾರಿ ಅವಳ ಗರ್ಭದಲ್ಲಿರುವವನು ಮಹಾ ವಿಷ್ಣುವೇ. ಯೋಗಮಾಯೆ ತಾನು ಕೂಡಾ ಆ ಗರ್ಭದೊಳಗೆ ಸೇರಿ ಕೊಂಡಳು. ಈ ಸಾರಿ ಕಂಸನು ಜಾಗರೂಕತೆಯನ್ನು ವಹಿಸಿ ದೇವಕೀ ವಸುದೇವರನ್ನು ಬಲವಾದ ನಿರ್ಬಂಧದಲ್ಲಿ ಇಡಿಸಿದನು.





# ಕನಿಷ್ಕನ ಔದಾರ್ಯ

ಅನೇಕ ನೂರು ವರ್ಷಗಳ ಹಿಂದೆ ಕುಷಾಣವಂಶದವನಾದ ಕನಿಷ್ಕನೆಂಬ ರಾಜನು ಪುರುಷಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಉತ್ತರ ಭಾರತ ದೇಶವನ್ನು ಪರಿಪಾಲಿಸಿಕೊಂಡಿದ್ದನು. ಅವನು ದೈವಾಂಶದಿಂದ ಅವತರಿಸಿದ ಮಹಾರಾಜನೆಂದು ಪ್ರಜೆಗಳಲ್ಲಿ ಒಂದು ನಂಬುಗೆಯಿದ್ದಿತು.

ಅದಕ್ಕೆ ತಕ್ಕಹಾಗೆಯೇ ಕನಿಷ್ಕನು ದಯಾ ಧರ್ಮ ಗುಣಗಳಿಗೆ ಮಾತ್ರವಲ್ಲದೆ, ಧೈರ್ಯ ಸಾಹಸಗಳಿಗೆ ಕೂಡಾ ಈಡುಜೋಡಿಲ್ಲದವನೆಂದು ಹೆಸರು ಪಡೆದಿದ್ದನು. ಅವನು ಆ ಕಾಲದ ಬಲವಂತರಾದ ಅನೇಕ ಮಂದಿ ರಾಜರನ್ನು ಜಯಿಸಿ ಅವರನ್ನೆಲ್ಲ ತನ್ನ ಸಾಮಂತರನ್ನಾಗಿ ಮಾಡಿಕೊಂಡಿದ್ದನು. ಅಂತಹ ಸಾಮಂತರಲ್ಲಿ ಕನ್ಯಾಕುಬ್ಜದ ರಾಜನೂ ಒಬ್ಬನು.

ಕನಿಷ್ಕ ಮಹಾರಾಜನ ಜನ್ಮದಿನೋತ್ಸವವು ಬಂದಾಗ ಸಾಮಂತರಾಜರು ಅವನಿಗೆ ಕಾಣಿಕೆಗಳನ್ನು ಕಳುಹಿಸುವುದು ಪದ್ಧತಿಯಾಗಿದ್ದಿತು. ಅದರಂತೆ ಒಂದುಸಾರಿ ಅವನ ಜನ್ಮದಿನೋತ್ಸವ ಬಂದಾಗ ಕನ್ಯಾಕುಬ್ಜದ ರಾಜನು ತನ್ನ ಕಾಣಿಕೆಯಾಗಿ ಒಂದು ಸುಂದರವಾದ ಪಟ್ಟೆ ಬಟ್ಟೆಯನ್ನು ಕಳುಹಿಸಿ ಕೊಟ್ಟನು.

ಕನಿಷ್ಕ ಮಹಾರಾಜನಿಗೆ ಬಂದ ಎಲ್ಲಾ ಕಾಣಿಕೆ ವಸ್ತುಗಳಲ್ಲಿ ಕನ್ಯಾಕುಬ್ಜದವನ ಪಟ್ಟೇ ಬಟ್ಟೆ ಕನಿಷ್ಕನನ್ನು ತುಂಬಾ ಆಕರ್ಷಣೆ ಮಾಡಿತು. ಆ ಬಟ್ಟೆಯಿಂದ ತಾನೊಂದು ಅಂಗಿಯನ್ನು ಹೊಲಿಸಿಕೊಂಡರೆ ಚೆನ್ನಾಗಿರುತ್ತದೆಂದು ಅವನಿಗೆ ತೋರಿತು. ಅಂತೆಯೇ ದರ್ಜಿಯನ್ನು ಕರೆಯಿಸಿ ಒಂದು ವಾರದೊಳಗೆ ಆ ಬಟ್ಟೆಯಿಂದ ಅಂಗಿಯನ್ನು ಹೊಲಿದು ಕೊಡಬೇಕೆಂದು ಹೇಳಿದನು.

ಒಂದು ವಾರ ಕಳೆದು ಎರಡು ವಾರಗಳಾದರೂ ದರ್ಜಿ ಅಂಗಿ ಹೊಲಿದು ತರಲಿಲ್ಲ. ಕನಿಷ್ಕ ರಾಜನು ಕುಪಿತನಾಗಿ ಆ ದರ್ಜಿಯನ್ನು ಇದ್ದವನಿದ್ದ ಹಾಗೆಯೇ ಎಳೆದುಕೊಂಡು ಬರಲು ಆಜ್ಞೆಮಾಡಿ ಭಟರನ್ನು ಕಳುಹಿಸಿದನು. ಭಟರು ಕೂಡಲೇ ಹೋಗಿ ದರ್ಜಿಯನ್ನು ಕನಿಷ್ಕ ರಾಜನ ಬಳಿಗೆ ಎಳೆದು ತಂದರು. ಅವನು ಅಂಗಿಯನ್ನೇ ಹೊಲಿದಿರಲಿಲ್ಲ. ರಾಜನು ಕಳುಹಿಸಿದ ಬಟ್ಟೆಯನ್ನು ಹಾಗೇ ವಾಪಾಸು ತಂದಿದ್ದನು.

ಅಂಗಿ ಹೊಲಿಯಲು ಇಷ್ಟು ದಿನಗಳನ್ನು ತೆಗೆದುಕೊಳ್ಳಲು ಕಾರಣವೇನೆಂದು ರಾಜನು ದರ್ಜಿಯನ್ನು ಕೇಳಿದನು. ದರ್ಜಿ ತಾನು ತಂದ ಬಟ್ಟೆಯನ್ನು

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ



ಕೆಳಗಿಟ್ಟು, ರಾಜನಿಗೆ ಕೈಮುಗಿದು, "ಮಹಾ ಪ್ರಭುಗಳೇ! ಇದರಲ್ಲಿ ನನ್ನ ತಪ್ಪೇನೂ ಇಲ್ಲ. ತಾವು ಅಂಗಿ ಹೊಲಿಯಲು ಕೊಟ್ಟ ಪಟ್ಟೇ ಬಟ್ಟೇ ಮೇಲೆ ಎರಡು ಪಾದಗಳ ಚಿಹ್ನೆಗಳು ನೇಯಲ್ಪಟ್ಟಿವೆ. ಬಟ್ಟೆಯನ್ನು ಹೇಗೆ ತಿರುಗಿಸಿ ಹೊಲಿದರೂ ಆ ಎರಡು ಪಾದ ಚಿಹ್ನೆಗಳೂ ನಿಮ್ಮ ಬೆನ್ನಿನ ಮೇಲೆಯೇ ಇರುತ್ತವೆ. ಅಂಥಾದ್ದನ್ನು ಹೊಲಿಯಲು ನನಗೆ ಕೈಬರಲಿಲ್ಲ. ಈ ಸಂಗತಿಯನ್ನು ತಮಗೆ ಅರಿಕೆ ಮಾಡಲಿಕ್ಕೂ ಅಂಜಿ ಸುಮ್ಮನಿದ್ದೆನು. ನನ್ನನ್ನು ಕ್ಷಮಿಸಬೇಕು" ಎಂದು ಹೇಳಿ ಆ ಪಟ್ಟೆ ಬಟ್ಟೆಯನ್ನು ಕನಿಷ್ಕ ರಾಜನಿಗೆ ಹಿಂಗಿರುಗಿಸಿ ಕೊಟ್ಟನು.

ಕನಿಷ್ಕನು ಮತ್ತಿಷ್ಟು ಕೋಪದಿಂದ, ಆ ಬಟ್ಟೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ದರ್ಜಿ ಹೇಳಿದುದು ನಿಜವೆಂದು ಗೊತ್ತಾಯಿತು. ಇನ್ನು ಅವನ ಕೋಪಕ್ಕಂತೂ ಮೇರೆ ಇರಲಿಲ್ಲ. ಇದನ್ನು ಕಳುಹಿಸಿದ ಸಾಮಂತನಿಗೆ ಎಷ್ಟು ಕೊಬ್ಬು ಇರಬೇಡ!

"ಈ ಕನ್ಯಾಕುಬ್ಜದ ಸಾಮಂತನು ನನ್ನನ್ನೇ ಅವಮಾನಿಸುತ್ತಾನೇನು? ಏನು ಧೈರ್ಯ ಅವನಿಗೆ! ಅವನ ಪೊಗರು ಅಡಗಿಸದೆ ಬಿಡಲಾರೆ!" ಎಂದು ಕನಿಷ್ಕನು, ಮಂತ್ರಿಯನ್ನೂ ಸೇನಾನಾಯಕನನ್ನೂ ಕರೆಯಿಸಿ ಮಾತಾಡಿದನು. ಏಳು ದಿನಗಳೊಳಗೆ ಸಕಲ ಸೇನೆಗಳನ್ನೂ ಯುದ್ಧಕ್ಕೆ ಸಿದ್ಧಪಡಿಸಿ, ಕನಿಷ್ಕ ರಾಜನು ಕನ್ಯಾಕುಬ್ಜ ರಾಜ್ಯದ ಮೇಲೆ ದಂಡೆತ್ತಿ ಹೊರಟನು.

ಕನಿಷ್ಕ ಮಹಾರಾಜನು ತನ್ನ ಮೇಲೆ ದೊಡ್ಡ ಸೈನ್ಯದೊಂದಿಗೆ ಬರುವ ಸಮಾಚಾರ ಕನ್ಯಾಕುಬ್ಜದ ರಾಜನಿಗೆ ಗೊತ್ತಾಯಿತು. ಮಹಾ ಬಲಿಷ್ಠನಾದ ಕನಿಷ್ಕ ರಾಜನನ್ನು ಇದಿರಿಸಿ ಹೋರಾಡುವ ಶಕ್ತಿ ತನಗಿಲ್ಲವೆಂದು ಅವನಿಗೆ ಗೊತ್ತಿದ್ದಿತು. ಹಾಗಾದರೆ ಈಗ ಏನು ಮಾಡಬೇಕು?

ರಾಜನು ಬರಲಿರುವ ಅಪಾಯವನ್ನು ಕುರಿತು ತನ್ನ ಮುಖ್ಯಮಂತ್ರಿಯೊಂದಿಗೆ ಹೇಳಿ, "ಏನಾದರೂ ಉಪಾಯ ಆಲೋಚಿಸಿ ಹೇಳಿರಿ" ಎಂದನು.

ಅದಕ್ಕೆ ಮಂತ್ರಿ, "ಮಹಾರಾಜಾ, ನಾನು ಮೊದಲೇ ತಮಗೆ ಆ ಬಗೆಯ ಕಾಣಿಕೆ ಕಳುಹಿಸ ಬಾರದೆಂದು ವಿನಂತಿಸಿಕೊಂಡಿದ್ದೆ. ಬೇಕಂತಲೇ ನಿದ್ರೆ ಮಾಡಿಕೊಂಡಿದ್ದ ಕಾರ್ಕೋಟಕ ಸರ್ಪವನ್ನು ತುಳಿದ ಹಾಗಾಯಿತು. ಇದು ಕೈಯಾರೆ ತಂದುಕೊಂಡ ಉಪದ್ರವ! ಇನ್ನು ಮೇಲೆ ದೇವರೇ ಕಾಪಾಡಿದರೆ ಉಂಟು. ನಾವೇನೂ ಮಾಡುವಂತಿಲ್ಲ." ಎಂದನು.

ಇದನ್ನು ಕೇಳಿ ರಾಜನು ತಲೆಯಾಡಿಸುತ್ತ, "ಆ ಪಾದದ ಗುರುತುಗಳು ಕಲಾತ್ಮಕವಾಗಿ ವಿಷ್ಣು ಪಾದಗಳನ್ನು ನೆನಪಿಗೆ ತರುತ್ತವೆಂದು ನಾನೆಂದು ಕೊಂಡರೆ ಹೀಗೆ ವಿಪರೀತವಾಯಿತು. ಅದೆಲ್ಲ ಸರಿಯೇ. ಆದುದೇನೋ ಆಗಿಹೋಯಿತು. ಇನ್ನು ಅದನ್ನು ಕುರಿತು ಚಿಂತಿಸಿ ಪ್ರಯೋಜನವೇನಿಲ್ಲ. ಈಗ ಏನೋ ಒಂದು ಉಪಾಯ ಆಲೋಚಿಸ

ದಿದ್ದರೆ ನಮ್ಮ ಪ್ರಾಣಗಳೂ ರಾಜ್ಯವೂ ದಕ್ಕಲಾರದು" ಎಂದನು ಚಿಂತಿಸುತ್ತಾ.

ಆಗ ಮಂತ್ರಿ ರಾಜನೊಂದಿಗೆ, "ಹಾಗಾದರೆ ಒಂದು ಕೆಲಸಮಾಡಿರಿ. ಏಕೆ ಏನೆಂದು ವಿಚಾರಿಸದೆ ನನ್ನ ಕೈಯನ್ನು ಕಡಿಸಿಬಿಡಿರಿ!" ಎಂದನು ಒಂದು ನಿಶ್ಚಯಕ್ಕೆ ಬಂದವನಂತೆ.

ಮಂತ್ರಿ ಹೇಳಿದುದನ್ನು ಕೇಳಿ ಕನ್ಯಾಕುಬ್ಜದ ರಾಜನಿಗೆ ಕಳವಳವಾಯಿತು. ಅಖಂಡ ರಾಜಭಕ್ತಿಯುಳ್ಳವನಾದ ಮಂತ್ರಿಯನ್ನು ಅಂಗವಿಕಲಮಾಡಲು ಅವನಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಆದರೆ ಬೇರೇನೂ ಮಾಡಲು ಸಾಧ್ಯವಿಲ್ಲದೆ ರಾಜನು ಕಟುಕನನ್ನು ಕರೆಯಿಸಿ ಮಂತ್ರಿಯ ಕೈಯನ್ನು ಕಡಿಸಿದನು.

ಎಂಟು ದಿನಗಳು ಕಳೆದ ಮೇಲೆ ಆ ಮಂತ್ರಿ ಉತ್ತಮವಾದೊಂದು ಕುದುರೆಯ ಮೇಲೇರಿಕೊಂಡು, ಕನಿಷ್ಕನು ಸೈನ್ಯದೊಂದಿಗೆ ಬರುವ ಮಾರ್ಗದಲ್ಲಿ ಅವನಿಗಿದಿರಾಗಿ ಹೋದನು. ಕನ್ಯಾಕುಬ್ಜ ರಾಜ್ಯದ ಸರಿಹದ್ದು ದಾಟಿ ಕನಿಷ್ಕನನ್ನು ಸಂಧಿಸಿದನು.

"ಮಹಾರಾಜರೇ, ನಾನು ಕನ್ಯಾಕುಬ್ಜದ ಮಂತ್ರಿ. ನಮ್ಮ ರಾಜನು ನಿಮಗೆ ಮಾಡಿದ ಅವಮಾನವನ್ನು ನಾನು ತಡೆಯಲು ಪ್ರಯತ್ನಿಸಿದಾಗ ನನಗೆ ಸಿಕ್ಕಿದ ಫಲವಿದು!" ಎಂದು ಕನ್ಯಾಕುಬ್ಜದ ಮಂತ್ರಿ ತನ್ನ ಮೊಂಡುಗೈಯನ್ನು ತೋರಿಸಿದನು.

ಕನಿಷ್ಕನು ಮಂತ್ರಿ ಹೇಳಿದ ಮಾತುಗಳನ್ನೆಲ್ಲಾ ಕೇಳಿದನು. ಅವನು ಕನ್ಯಾಕುಬ್ಜದ ರಾಜನಿಂದ ಶಿಕ್ಷಿಸಲ್ಪಟ್ಟನೆಂದೂ, ಆ ಶಿಕ್ಷೆ ತನ್ನ ಕಾರಣದಿಂದಲೇ ಇವನಿಗೆ ಸಿಕ್ಕಿತೆಂದೂ ಕನಿಷ್ಕನು ಭಾವಿಸಿ "ಸರಿ. ಆ ಸೊಕ್ಕು ಹಿಡಿದ ರಾಜನಿಗೆ ತಕ್ಕ ಶಿಕ್ಷೆ ನಾನು ಕೊಡುತ್ತೇನೆ. ಬೇಗದಲ್ಲೇ ಅವನನ್ನು ಯಮಪುರಿಗೆ ಪ್ರಯಾಣ ಕಟ್ಟಿಸುತ್ತೇನೆ." ಎಂದು ಮಂತ್ರಿಗೆ ಸಮಾಧಾನ ಹೇಳಿದನು. ಮಂತ್ರಿ ಅಷ್ಟಕ್ಕೆ ಸುಮ್ಮನಾಗಲಿಲ್ಲ.



"ಮಹಾರಾಜರೇ, ನನಗೆ ಹೀಗೆ ಮಾಡಿದ ಆ ರಾಜನಿಗೆ ಪ್ರತೀಕಾರವಾಗುವವರೆಗೂ ನನಗೆ ಮನಃಶಾಂತಿ ಇಲ್ಲ. ನೀವು ದಂಡೆತ್ತಿ ಬರುವ ಸಂಗತಿ ಗೊತ್ತಾದ್ದರಿಂದ ಆ ರಾಜನು ಪಟ್ಟಣವನ್ನು ಬಿಟ್ಟು ಓಡಿದ್ದಾನೆ. ಅವನು ಯಾವ ಕಡೆಗೆ ಹೋಗಿರುವನೆಂಬುದು ನನಗೆ ಗೊತ್ತಿದೆ. ನಾವು ಅವನ ದಾರಿಯನ್ನು ಅಡ್ಡಗಟ್ಟಿ ಹಿಡಿಯಬೇಕು." ಎಂದು ಹೇಳಿದನು ಮಂತ್ರಿ.

"ಒಳ್ಳೆಯದು. ಹಾಗೇ ಮಾಡೋಣ. ಅವನನ್ನು ಹಿಡಿಯುವುದು ಹೇಗೆಂಬುದನ್ನು ಸ್ವಲ್ಪ ವಿವರಿಸಿ ಹೇಳು ನೋಡುವಾ" ಎಂದನು ಕನಿಷ್ಕ ಮಹಾರಾಜ.

ಮಂತ್ರಿ ಹೀಗೆಂದನು: "ಮಹಾರಾಜರೆ, ಆತನನ್ನು ಹಿಡಿಯಬೇಕಾದರೆ ನಮಗೆ ಎರಡೇ ದಾರಿಗಳಿವೆ. ಒಂದು ಮಾರ್ಗವನ್ನು ಅನುಸರಿಸಿ ಹೋದರೆ ಸರಿಯಾಗಿ ನಲುವತ್ತು ದಿನಗಳು ಬೇಕು. ಎರಡನೇ ಮಾರ್ಗವನ್ನು ಹಿಡಿದು ಹೋದರೆ ಏಳು ದಿನಗಳಲ್ಲಿ



ಅಲ್ಲಿಗೆ ಹೋಗಿ ಸೇರಬಹುದು. ಆದರೆ ಈ ಮಾರ್ಗವು ಬಹಳ ಕಂಟಕಪ್ರಾಯವಾದುದು. ಒಣಗಿದ ಮೈದಾನದ ದಾರಿಯಲ್ಲಿ ಪ್ರಯಾಣಮಾಡಬೇಕಾಗಿ ಬರುತ್ತದೆ. ನೀರಿನ ಪಸೆ ಕೂಡಾ ಆ ಮಾರ್ಗದಲ್ಲಿಲ್ಲ. ಇದನ್ನೆಲ್ಲ ಪರ್ಯಾಲೋಚಿಸಿ ಯಾವ ಮಾರ್ಗ ಒಳಿತೆಂದು ಖಂಡಿತಮಾಡಿ ಹೇಳಿಬಿಡಿ." ಎಂದನು.

ಕನಿಷ್ಕನು ಸ್ವಲ್ಪ ಹೊತ್ತು ಆಲೋಚನೆ ಮಾಡಿದ ಮೇಲೆ, ಎರಡನೇ ಮಾರ್ಗದಲ್ಲಿ ಹೋಗುವುದೇ ಒಳ್ಳೆಯದೆಂದು ನಿಶ್ಚಯಿಸಿದನು. ಈ ಪ್ರಯಾಣವು ಏಳೆಂಟು ದಿನಗಳೇ ಆದರೂ ಹತ್ತು ದಿನಗಳವರೆಗೆ ಬೇಕಾದ ನೀರು ಮತ್ತು ಆಹಾರ ಪದಾರ್ಥಗಳನ್ನು ಸಂಗ್ರಹಿಸಿಕೊಂಡು, ಸೈನ್ಯದೊಂದಿಗೆ ಮೊಂಡುಗೈಯ ಮಂತ್ರಿಯನ್ನು ಮುಂದಿಟ್ಟುಕೊಂಡು ಹೊರಟನು.

ಉದ್ದಾನುದ್ದವಾಗಿ ಬಿದ್ದಿದ್ದ ಮೈದಾನ ಪ್ರದೇಶದಲ್ಲಿ ಸೈನ್ಯಗಳು ನಡೆಯುತ್ತಿದ್ದುವು. ಎಲ್ಲಿಯೂ ಒಂದು ಮರವೋ ಗಿಡವೋ ಇಲ್ಲ. ನೀರಂತೂ ಎಲ್ಲಿಯೂ ಇರುವಂತಿಲ್ಲ. ಅಂದುಕೊಂಡ ದಿನಗಳು ದಾಟಿ, ಹನ್ನೆರಡು ದಿನಗಳಾದರೂ ಗಮ್ಯಸ್ಥಾನವು ಕಾಣಿಸಲಿಲ್ಲ. ಮತ್ತೂ ಎರಡು ದಿನಗಳು ಕಳೆಯುವಷ್ಟರಲ್ಲಿ ಆಹಾರ ಇರಲಿ ಇಲ್ಲದಿರಲಿ, ನೀರಡಿಕೆ ತೀರಿಸಿಕೊಳ್ಳಲಿಕ್ಕಾದರೂ ನೀರಿಲ್ಲದೆ ಸೈನಿಕರು ಯಾತನೆ ಪಡತೊಡಗಿದರು. ಹತ್ತು ದಿನಗಳ ಲೆಕ್ಕದಲ್ಲಿ ತಂದುಕೊಂಡಿದ್ದ ಆಹಾರ ಪದಾರ್ಥಗಳೂ, ಸಂಬಾರಗಳೂ ನೀರೂ ಮುಗಿದುಹೋದುವು.

ಪರಿಸ್ಥಿತಿ ಹೀಗೆ ಇದಿರು ತಿರುಗುವುದನ್ನು ನೋಡಿ ಕನಿಷ್ಕರಾಜನು ಕನ್ಯಾಕುಬ್ಜದ ಮಂತ್ರಿಯನ್ನು ಕರೆದು, "ಹನ್ನೆರಡು ದಿನಗಳಾದರೂ ಗಮ್ಯಸ್ಥಾನವು ಏಕೆ ಬರಲಿಲ್ಲ ? " ಎಂದು ಕೇಳಿದನು.

ಅದಕ್ಕೆ ಮೊಂಡುಗೈ ಮಂತ್ರಿ ವಿಕಟವಾಗಿ ನಕ್ಕು, "ಇನ್ನೆಲ್ಲಿಯ ಗಮ್ಯ ಸ್ಥಾನ ? ಮಹಾರಾಜಾ, ನಿಮ್ಮನ್ನು ಬೇಕೆಂತಲೇ ನಾನು ಈ ವಿಧವಾಗಿ ಮೋಸಬಡಿಸಿದೆ. ನೀವೇನೋ ನಮ್ಮ ರಾಜನನ್ನು ಯಮಪುರಿಗೆ ಕಳುಹಿಸುವೆನೆಂದು ಪ್ರತಿಜ್ಞೆ ಮಾಡಿದಿರಿ. ಆದರೆ ಈಗ ನೀವೇ ನಿಮ್ಮ ದೊಡ್ಡ ಸೈನ್ಯದೊಂದಿಗೆ ಯಮಪುರಿಗೆ ಹೋಗಬೇಕಾದ ಕಾಲ ಸಮೀಪಿಸುತ್ತಾ ಇದೆ. ನೀವು ಹಿಂದಿರುಗಿ ಹೋಗಬೇಕಾದರೂ, ಅಥವಾ ಮುಂದಕ್ಕೇ ಹೋಗಬೇಕಾದರೂ ಹನ್ನೆರಡು ದಿನಗಳು ಬೇಕಾಗುತ್ತದೆ. ಆದುದರಿಂದ ಎಲ್ಲರೂ ಒಂದು ಬೊಟ್ಟು ನೀರೂ ಇಲ್ಲದ ಈ ಒಣ ಮೈದಾನ ಪ್ರದೇಶದಲ್ಲಿ ಗಂಟಲೊಣಗಿ ಪ್ರಾಣಬಿಡುವುದರ ಹೊರತು ಬೇರೆ ಗತಿಯಿಲ್ಲ. ಇದಕ್ಕೆಲ್ಲ ಕಾರಣನಾದ ನನ್ನನ್ನು ಈ ನಿಮಿಷದಲ್ಲೇ ನೀವು ಶಿರಚ್ಛೇದಮಾಡಿಸುವಿರೆಂದು ಬಲ್ಲೆ. ಆದರೂ ನನಗೇನೂ ಚಿಂತೆಯಿಲ್ಲ. ನನ್ನ ಶ್ರಮ ಫಲಿಸಿತು. ನನ್ನ ರಾಜನ ಕಾರ್ಯ ನೆರವೇರಿತು " ಎಂದನು.

ಈ ಮಾತುಗಳನ್ನು ಕೇಳುತ್ತಿದ್ದ ಕನಿಷ್ಕ ಮಹಾರಾಜನು ಒಂದು ಕ್ಷಣ ನಿಶ್ಚೇಷ್ಟನಂತಾದನು. ಅಷ್ಟ

ರೊಳಗೆ ಮುಗುಳುನಗು ಅವನ ತುಟಿಗಳಲ್ಲಿ ಲಾಸ್ಯವಾಡಿತು. ಅದನ್ನು ನೋಡಿ ಮಂತ್ರಿ ಆಶ್ಚರ್ಯಪಡುತ್ತಿರಲು, ಕನಿಷ್ಕನು ಮಂತ್ರಿಯ ಬೆನ್ನು ಬಡೆದು, "ಭೇಷ್! ಮಂತ್ರೀ! ನಿನ್ನ ರಾಜಭಕ್ತಿ ತುಂಬಾ ಮೆಚ್ಚುವಂತಹುದು. ಆದರೆ ಒಂದು ಸಂಗತಿಯನ್ನು ನೀನು ಮರೆತುಬಿಟ್ಟಿರುವಿ. ನಾನು ದೈವಾಂಶದಿಂದ ಹುಟ್ಟಿದವನೆಂದು ಹೇಳುವ ಮಾತು ನೀನೂ ಕೇಳಿರಬಹುದು. ಅದು ಕಟ್ಟುಕಥೆಯೇನಲ್ಲ! ಈಗ ನೀನೇ ನೋಡುವೆಯಂತೆ." ಎಂದು ತನ್ನ ಕುದುರೆಯನ್ನೇರಿ, ದೈವದತ್ತವಾದ ತನ್ನ ಕುಂತಾಯುಧವನ್ನು ತೆಗೆದುಕೊಂಡು ಎಲ್ಲರನ್ನೂ ಅಲ್ಲೇ ಇರುವಂತೆ ಹೇಳಿ ಒಂಟಿಯಾಗಿಯೇ ಹೊರಟನು.

ಕನಿಷ್ಕನು ಆ ಮೈದಾನ ಪ್ರದೇಶದಲ್ಲಿ ಸುಮಾರು ಎರಡು ಹರದಾರಿಯಷ್ಟು ಸುತ್ತು ಹಾಕಿ ಒಂದು ಕಡೆಯಲ್ಲಿ ನಿಂತನು. ಆ ಸ್ಥಳವು ಒಣಗಿಹೋದ ಒಂದು ಕೊಳದ ಹಾಗಿತ್ತು. ಅವನು ಕುದುರೆಯಿಂದಿಳಿದು ಆ ಕೊಳದ ಮಧ್ಯಕ್ಕೆ ಹೋಗಿ ತನ್ನ ಕೈಯಲ್ಲಿದ್ದ ಕುಂತದಿಂದ ಭೂಮಿಯನ್ನು ಬಲವಾಗಿ ತಿವಿದನು. ಮರುಕ್ಷಣದಲ್ಲಿ ಆ ಕುಂತವು ಭೂಮಿಗಿಳಿದ ಸ್ಥಳದಲ್ಲಿ, ಆಕಾಶದವರೆಗೆ ಹಾರುವಂತಹ ಒಂದು ಜಲಧಾರೆ ಚಿಮ್ಮಿಕೊಂಡಿತು. ಕೊಳವು ನೀರಿನಿಂದ ತುಂಬುತ್ತಿರಲು, ಕನಿಷ್ಕನು ಮಂತ್ರಿಯ ಬಳಿಗೆ ಬಂದು, "ಈಗ ನೋಡಿದೆಯಾ ಮಂತ್ರೀ! ನನ್ನ ಶಕ್ತಿ ಎಂತಹುದೆಂದು ಗೊತ್ತಾಯಿತಷ್ಟೆ? ಈಗ ಅನಾವಶ್ಯಕವಾಗಿ ಅಂಗವಿಕಲತೆಯನ್ನೂ, ಇಷ್ಟೆಲ್ಲಾ ಕಷ್ಟಗಳನ್ನೂ ತಂದುಕೊಂಡುದಕ್ಕೆ ವ್ಯಸನ ಪಡಬೇಕಾದವನು ನೀನೇ!" ಎಂದನು. ಮಂತ್ರಿ ನಾಚಿಕೆಯಿಂದ ತಲೆ ಬಗ್ಗಿಸಿಕೊಳ್ಳಬೇಕಾಯಿತು.

ಆ ಮೇಲೆ ಕನಿಷ್ಕ ರಾಜನು ಮತ್ತೆ ಸೈನ್ಯಗಳನ್ನು ಸಜ್ಜುಗೊಳಿಸಿ ಕನ್ಯಾಕುಬ್ಜದ ಕಡೆಗೆ ಹೊರಡಲು ತಯಾರಾದನು. ಆಗ ಮೊಂಡುಗೈಯ ಮಂತ್ರಿ ಅವನ ಬಳಿಗೆ ಹೋಗಿ, "ಮಹಾರಾಜರೇ! ನೀವು ದೈವಾಂಶ ಸಂಭೂತರೆಂದು ಈಗ ನಾನು ಚೆನ್ನಾಗಿ ತಿಳಿದುಕೊಂಡೆ. ನನ್ನ ಮೇಲೆ ನೀವು ತೋರಿಸಿದ ಔದಾರ್ಯಕ್ಕೆ ಎಣೆಯೇ ಇಲ್ಲ. ಇಷ್ಟೊಂದು ಉದಾರ ಚಕ್ರವರ್ತಿಗಳಾಗಿರುವ ನೀವು, ಇಂಗಿತಜ್ಞಾನವಿಲ್ಲದ ಒಬ್ಬ ಅಲ್ಪ ರಾಜನ ಅವಮಾನದ ಕಾರ್ಯವನ್ನು ಸಹಿಸಿ ಕ್ಷಮಿಸಲಾರಿರಾ?" ಎಂದು ವಿನಯದಿಂದ ಬೇಡಿದನು.

"ನಿಜವೇ!" ಎಂದು ಕನಿಷ್ಕನು ತಲೆಯಾಡಿಸಿ, ಸೈನ್ಯವನ್ನು ತನ್ನ ರಾಜಧಾನಿಗೇ ಹಿಂದಿರುಗಿಸಿದನು. ಮಂತ್ರಿ ಅವನಿಂದ ಅಪ್ಪಣೆ ಪಡೆದು ಕನ್ಯಾಕುಬ್ಜಕ್ಕೆ ಹೋಗಿ ತನ್ನ ರಾಜನಿಗೆ ಆ ಶುಭವಾರ್ತೆಯನ್ನು ತಿಳಿಯಪಡಿಸಿದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

**ಗೆದ್ದ ಶೀರ್ಷಿಕೆಗಳು ೧೯೭೯ ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ**



Branm Dev

★



Chandrapal Singh

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಅಕ್ಟೋಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ಆಗಸ್ಟ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಜೀವನ ಯಾತ್ರೆಗೆ**

ಎರಡನೇ ಫೋಟೋ: **ಎರಡು ಬದಿಗಳೂ ಸರಿಸಮ ಇರಬೇಕು**

ಕಳುಹಿಸಿದವರು: **ಪ್ರಮೀಳಾ ಬಿ. ರಾವ್,**

೧೮ ನೇ ಕ್ರಾಸ್, ಬೆಂಗಳೂರು-೫೬೦ ೦೦೪

**Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor: NAGI REDDI.**



# ಕರಡಿ ಕೆಂಗಣ್ಣ

## ೧೫

[ಕಾಳೀವರ್ಮ ತನ್ನ ಅನುಚರರೊಂದಿಗೆ ಕೋಟೆಯೊಳಗೆ ಪ್ರವೇಶಿಸಿದನು. ಮಾಯಾಮರ್ಕಟನು ಮುಂಡದಿಂದ ಬೇರ್ಪಟ್ಟ ಒಂದು ತಲೆಯನ್ನು ತೋರಿಸಿದನು. ಅದು ದುರ್ಮುಖರಾಜನ ತಲೆ ಅಲ್ಲವೆಂದು ಗೊತ್ತಾಯಿತು. ಅವರು ದುರ್ಮುಖನನ್ನು ಹುಡುಕುವಾಗ ಸಭಾ ಮಂಟಪದಲ್ಲಿ ಸಿಂಹಾಸನದಲ್ಲಿ ಕುಳಿತಿದ್ದ ದುರ್ಮುಖನನ್ನು ನೋಡಿದರು. ಆಗ ಕರಡಿ ಮನುಷ್ಯ ಆನೆಯ ಮೇಲಿನಿಂದ ಮಂಟಪದೊಳಗೆ ಹಾರಿದನು.]

ಆವೇಶದಿಂದ ಚಪಗೊಡಲಿಯನ್ನೆತ್ತಿಕೊಂಡು ಕಟುಕ ಕರಡಿಯುವನು ಸಭಾ ಮಂಟಪದೊಳಗೆ ಹಾರಿದು ದನ್ನು ನೋಡುತ್ತಲೇ, ಅವನಿಂದ ಬರುವ ಅಪಾಯ ವನ್ನು ಅರಿತು ಕಾಳೀವರ್ಮನು, ಆನೆಯ ಮೇಲಿದ್ದ ಆಟವಿಕನನ್ನು ನೋಡಿ, "ಎಲೋ! ಆಟವಿಕಾ! ಓಡಿ ಹೋಗಿ ಆ ಕೊಲೆಗಾರನು ದುರ್ಮುಖರಾಜನ ತಲೆ ಕಡಿಯದಂತೆ ಅಡ್ಡಗಟ್ಟು. ದುರ್ಮುಖ ರಾಜನು ಹಾಗೆಲ್ಲಾ ಸಾಯಕೂಡದು! ಓಡು! ಓಡು!" ಎಂದು ಕೂಗಿ ಹೇಳಿದನು. ಕಾಳೀವರ್ಮನ ಕಂಠದಿಂದ ಹೊರಟ ಗಂಭೀರ ಕೂಗಿನ ಅವರಸದ ಆಜ್ಞೆಯನ್ನು ಕೇಳುತ್ತಲೇ ಆಟವಿಕನು ಆನೆಯ ಮೇಲಿನಿಂದ ಕೆಳಗೆ ಹಾರಿ, ಓಡುತ್ತಾ ಹೋಗಿ ಕಟುಕಕರಡಿಯುವನ ಮುಂದೆ ಅಡ್ಡಗಟ್ಟಿ ತಿರುಗಿ ನಿಂತು, "ಭಲ್ಲೂಕ ದೊರೇ! ದುಡುಕಬಾರದಂತೆ. ದುರ್ಮುಖರಾಜನ ತಲೆಯನ್ನು ಕಡಿಯಬಾರದು ಅಂತ ಕಾಳೀವರ್ಮ ಮಹಾನಾಯಕರು ಹೇಳುತ್ತಾರೆ." ಎಂದನು.

ಅದನ್ನು ಕೇಳಿ ಕಟುಕ ಕರಡಿಯುವನು ಆಶ್ಚರ್ಯ ಪಡುತ್ತಾ, "ಇದೆಂಥ ವಕ್ರಮಾತು? ತಮ್ಮನ್ನು ಅವಮಾನಪಡಿಸಿದ ದುಷ್ಟ ದುರ್ಮುಖರಾಜನ ತಲೆ ಕಡಿದು ತರಬೇಕೆಂದಲ್ಲವೇ ಕರಡಿ ಕೆಂಗಣ್ಣ ಮಹಾ



ಮಾಂತ್ರಿಕರ ಆಜ್ಞೆ? ಅದಕ್ಕಾಗಿ ತಾನೇ ಇಷ್ಟೆಲ್ಲಾ ಹೇಚಾಡುತ್ತಿದ್ದೇನೆ? ಅವರ ಆಜ್ಞೆ ನೆರವೇರಿಸದೆ ಹೋದರೆ ನನ್ನನ್ನು ನಖಶಿಖಾಂತ ಕರಡಿಯಾಗಿಯೇ ಮಾಡಿಬಿಟ್ಟಾರು!" ಎಂದನು.

ಅಷ್ಟರೊಳಗೆ ಅಲ್ಲಿಗೆ ಕಾಳೀವರ್ಮನು ಬಂದನು. ಕಟುಕಕರಡಿಯುವನು ಕಾಳೀವರ್ಮನನ್ನು ಮೀರಿ ಮುಂದು ವರಿಯಲು ಧೈರ್ಯವಿಲ್ಲದೆ ಟಕಮಕನೆ ನೋಡುತ್ತ ನಿಂತನು. ಕಾಳೀವರ್ಮನಿಗೂ ಸಿಂಹಾಸನ ದಲ್ಲಿ ಬೊಂಬೆಯ ಹಾಗೆ ಕುಳಿತಿರುವ ದುರ್ಮುಖ ನನ್ನು ನೋಡಿ ಆಶ್ಚರ್ಯವಾಯಿತು. "ಈ ರಾಜನಿಗೆ ಏನಾಯಿತು? ಮಂತ್ರ ಬಂಧನಗೊಂಡವನ ಹಾಗೆ ಕಣ್ಣುಮುಚ್ಚಿ ಕದಲದೆ ಕುಳಿತಿರುವನೇಕೆ? ನಿಜಕ್ಕೂ ಶತ್ರುಗಳೇನಾದರೂ ಮಂತ್ರ ಮಾಡಿರಬಹುದೆ?" ಎಂದು ತನಗೆ ತಾನೇ ಹೇಳಿಕೊಂಡನು.

"ಅದೇ ನಮ್ಮ ಕರಡಿ ಕೆಂಗಣ್ಣ ಮಹಾ ಮಾಂತ್ರಿಕರ ಮಹಿಮೆ ಎಂದರೆ! ಅವರ ಬಂಟನಾದ ನಾನು ಅವರ ಆಜ್ಞೆ ಹೊತ್ತುಕೊಂಡು ಬಂದದ್ದು ನೋಡಿ, ಹೀಗೆ ಪ್ರತಿಭಟನೆ ತೋರದೆ ಕುಳಿತಿದ್ದಾನೆ! ಅವರ ಮಂತ್ರ ಶಕ್ತಿಯ ಮಹಿಮೆಯೇ ಅಂಥಾದ್ದು! ಈಗ ನೀವೇನು ಆಜ್ಞೆ ಮಾಡುವಿರಿ? ಇವನ ತಲೆ ಕಡಿಯುವುದು ಬೇಡೆನ್ನುವಿರಾ? ಗುರುಗಳು ನಿಮ್ಮ ಹತ್ತಿರ ಏನಾದರೂ ಹೇಳಿದರೇನು?" ಎಂದು ಕೇಳಿದನು ಕಟುಕಕರಡಿಯುವನು.

ಕಾಳೀವರ್ಮನು ದುರ್ಮುಖನ ಹತ್ತಿರ ಹೋಗಿ ಪರೀಕ್ಷಿಸುತ್ತ, "ನರಭಲ್ಲೂಕಾ! ನೀನು ತಲೆ ಕಡಿಯುವು ದಕ್ಕೆ ಮೊದಲೇ ದುರ್ಮುಖನು ಪ್ರಾಣ ಬಿಟ್ಟಹಾಗಿದೆ. ಏನಾಗಿರಬಹುದು? ಕೊಡಲೀ ಬೀಸಿಕೊಂಡು ನೀನು ಬರುವುದನ್ನು ನೋಡಿಯೇ ಇವನ ಗುಂಡಿಗೆ ನಿಂತು ಹೋಯಿತೇನೊ?" ಎಂದನು.

"ನನ್ನ ನರಭಲ್ಲೂಕ ಶಿಷ್ಯನು ದುರ್ಮುಖನ ತಲೆ ಕಡಿಯಲಿಲ್ಲವಷ್ಟೆ?" ಎಂದು ಕೇಳುತ್ತ ಕೆಂಗಣ್ಣ ಮಾಂತ್ರಿಕನು ಅಲ್ಲಿಗೆ ಬಂದನು. ಅವನನ್ನು ನೋಡಿ ನರಭಲ್ಲೂಕನು ಬದಿಗೆ ಹಾರಿ ಪರಮ ವಿಧೇಯತೆ ಯಲ್ಲಿ ನಿಂತನು.

ಸಿಂಹಾಸನದಲ್ಲಿ ಅಚಲನಾಗಿ ಕುಳಿತಿದ್ದ ದುರ್ಮುಖ ರಾಜನನ್ನು ನೋಡಿ ಕರಡಿಕೆಂಗಣ್ಣನು, "ಪಾಪ! ಪ್ರಾಣಭಯದಿಂದ ಮೂರ್ಛೆ ಹೋಗಿದ್ದಾನೆ!" ಎನ್ನುತ್ತ ಕತ್ತಿಯನ್ನು ಅವನ ಹೆಗಲಿಗೆ ತಾಗಿಸಿ, "ರಾಜಾ! ದುರ್ಮುಖಾ! ನಿನ್ನ ಪ್ರಾಣಕ್ಕೆ ಏನೂ ಭಯವಿಲ್ಲ! ಎದ್ದೇಳು. ಕಣ್ಣು ಬಿಟ್ಟು ಮುಂದಿರುವವ ರನ್ನು ನೋಡು." ಎಂದನು.

ಆ ಕೂಡಲೇ ದುರ್ಮುಖನು ಕಣ್ಣು ತೆರೆದು ಎರಡು ಕೈಗಳನ್ನೂ ತಲೆಯ ಮೇಲಿನಿಂದ ಕುತ್ತಿಗೆಯ ವರೆಗೂ ಇಳಿಸಿಕೊಳ್ಳುತ್ತ, "ಆಹ್! ನನ್ನ ತಲೆ! ಏನೂ ಆಗದೆ ಕುತ್ತಿಗೆ ಮೇಲೆ ಇನ್ನೂ ಹಾಗೇ ಇದೆ! ಕಟುಕನ ಕೊಡಲಿಯ ಪೆಟ್ಟಿಗೂ ಏನೂ ಆಗ ಲಿಲ್ಲವೆ? ಪೆಟ್ಟು ಬಿದ್ದದ್ದೇ ಗೊತ್ತಾಗಲಿಲ್ಲ. ಅಷ್ಟು

ಗಟ್ಟಿ ನನ್ನ ತಲೆ!" ಎಂದನು ತನಗೆ ತಾನೇ. ಇನ್ನೂ ಅಲ್ಲಿರುವವರ ಮೇಲೆ ಅವನ ಲಕ್ಷ್ಯ ಹರಿದಿಲ್ಲ.

ಅವನ ಮಾತು ಕೇಳಿ ಎಲ್ಲರೂ ಗೊಳ್ಳನೆ ನಕ್ಕರು. ಆ ನಗುವನ್ನು ಕೇಳಿ ದುರ್ಮುಖನು ಗಾಬರಿಯಿಂದ ಎದ್ದು ನಿಂತು, "ಹ! ಕಾಳೀವರ್ಮ! ಮಾಂತ್ರಿಕ! ಎಲ್ಲರೂ ಇಲ್ಲಿರುವಿರಾ? ನನಗೇನೋ ಸಿಂಹಾಸನದ ಮೇಲೆ ಒಂದುಸಾರಿ ಕುಳಿತು ಪ್ರಾಣ ಬಿಡಬೇಕೆಂದಿತ್ತು. ಕುಳಿತಾಯಿತು. ಕೋರಿಕೆ ತೀರಿತು. ಇನ್ನೂ ತಲೆ ಏಕೆ ಹಾರಿಲ್ಲವೋ ? ಈಗ ನನ್ನ ತಲೆ ಹಾರಿಬಿದ್ದರೂ ನನಗೇನೂ ವ್ಯಸನವಿಲ್ಲ." ಎಂದನು.

"ಇನ್ನೂ ಕುಳಿತುಕೋ ರಾಜಾ" ಎಂದು ಕಾಳೀವರ್ಮನು ದುರ್ಮುಖ ರಾಜನ ಭುಜಗಳನ್ನು ಹಿಡಿದು ಸಿಂಹಾಸನದ ಮೇಲೆ ಒತ್ತಿ ಕುಳ್ಳಿರಿಸಿ, "ದುರ್ಮುಖ ಮಹಾರಾಜನೇ, ನೀನೀಗ ನಮ್ಮ ಸ್ನೇಹಿತನಾಗಿರುವೆ. ನಡೆದು ಹೋದುದನ್ನೆಲ್ಲಾ ಮರೆತುಬಿಡು. ನಿನ್ನ ಕೋಟೆಯನ್ನು ಆಕ್ರಮಿಸಿದ ದುಷ್ಟನಾದ ಸಾಮಂತ ಸೂರ್ಯ ಭೂಪತಿಯೂ, ನಮ್ಮ ಗುರು ಕರಡಿ ಕೆಂಗಣ್ಣ ಮಾಂತ್ರಿಕರ ಮಂತ್ರದಂಡವನ್ನು ಅಪಹರಿಸಿದ ಮಾಯಾ ಮರ್ಕಟವೂ ಎಲ್ಲಿರುವರೆಂದು ಗೊತ್ತಾಗಲಿಲ್ಲ. ನಾವೀಗ ಮೊದಲು ಅವರನ್ನು ಹಿಡಿಯಬೇಕು. ಅದಕ್ಕೆ ಸಹಾಯ ಮಾಡುವುದರಿಂದ ನಿನಗೂ ಒಳ್ಳೆಯದಾಗುತ್ತದೆ. ನಿನಗೆ ಗೊತ್ತಿರುವುದನ್ನು ಹೇಳು." ಎಂದನು.

ಕಾಳೀವರ್ಮನ ಮಾತನ್ನು ಕೇಳುತ್ತಿದ್ದಂತೆ, ದುರ್ಮುಖರಾಜನ ಮುಖವು ವಿಕಸಿತವಾಗುತ್ತಾ ಹೋಯಿತು. ಕಡೆಗೆ ಅವನು ಅತ್ಯಂತ ಸಂತೋಷದಿಂದ ಸಿಂಹಾಸನದ ಮೇಲಿಂದೆದ್ದು ಸಭಾಮಂಟಪದ ಮಧ್ಯಕ್ಕೆ ಬಂದು, ಕತ್ತಿಯನ್ನು ಸರ್ರನೆ ಹಿರಿದು ಎತ್ತಿ ಹಿಡಿದು ದೊಡ್ಡ ಕಂಠದಿಂದ, "ಯಾರಲ್ಲೀ! ಉದಯಗಿರಿ ರಾಜನಾದ ನಾನು ಆಜ್ಞೆ ಮಾಡುತ್ತಿದ್ದೇನೆ. ವಿಶ್ವಾಸವುಳ್ಳ ಸೈನಿಕರೆಲ್ಲಾ ಈ ಕ್ಷಣವೇ ಇಲ್ಲಿಗೆ ಬನ್ನಿ.



ಬಂದವರಿಗೆಲ್ಲ ಬಹುಮಾನ! ಬಾರದೇ ಇದ್ದವರನ್ನು ರಾಜದ್ರೋಹಿಗಳೆಂದು ಭಾವಿಸಲಾಗುವುದು. ಅಂಥವರಿಗೆ ಶಿರಚ್ಛೇದವೇ ತಕ್ಕ ಶಿಕ್ಷೆ! ಎಚ್ಚರಿಕೆ! ಕೇಳಿಸಿತೇನು?" ಎಂದನು.

ಆಗ ನರಭಲ್ಲೂಕನು ಮಂಟಪದ ಮುಂದಿನ ಗೋಡೆಯ ಮೇಲೆ ಹಾರಿನಿಂತು, ತನ್ನ ಕೊಡಲಿಯನ್ನು ಝಳಪಿಸುತ್ತ, "ಯಾರಲ್ಲೀ! ಈ ಕೋಟೆಯೊಳಗೂ ಹೊರಗೂ ಅಲ್ಲೀ ಇಲ್ಲೀ ಅಡಗಿರುವವರೆಲ್ಲಾ ದುರ್ಮುಖರಾಜರ ಆಜ್ಞೆಯನ್ನು ಕೇಳಿದಿರಾ? ಎಲ್ಲರೂ ಬನ್ನಿ! ಓಡೋಡಿ ಬನ್ನಿ!" ಎಂದು ಕರ್ಕಶ ಸ್ವರದಿಂದ ಅರಚಿ ಹೇಳಿದನು. ಕೂಡಲೇ ಕೋಟೆಯ ಎಲ್ಲಾ ಬದಿಗಳಿಂದಲೂ ಗುಂಪು ಗುಂಪಾಗಿ ಸೈನಿಕರು ಹೊರಟು ಬರುತ್ತ ಸಭಾ ಮಂಟಪದ ಮುಂದಿನ ಪ್ರಾಂಗಣದಲ್ಲಿ ಕೂಡ ತೊಡಗಿದರು. ಬರುವಷ್ಟು ಮಂದಿ ಬಂದು ಸೇರಿದ ಮೇಲೆ ಕಾಳೀವರ್ಮನು ಅವರನ್ನೆಲ್ಲಾ ಎಣಿಸಿ ನೋಡಿ, ರಾಜಾ ದುರ್ಮುಖ



ನೊಂದಿಗೆ, "ರಾಜಾ! ಈಗ ಬಂದಿರುವ ಸೈನಿಕರು ನಲುವತ್ತು ಮಂದಿಗಿಂತ ಹೆಚ್ಚಿಗಿಲ್ಲ. ಇಷ್ಟೇನಾ ನಿನ್ನ ಸೈನಿಕಬಲ?" ಎಂದು ಕೇಳಿದನು.

ದುರ್ಮುಖ ರಾಜನು ಅವಮಾನದಿಂದ ತಲೆ ತಗ್ಗಿಸಿ, "ಕಾಳೀವರ್ಮಾ, ನನ್ನ ಸೈನಿಕರೆಲ್ಲರನ್ನೂ ಘಾತುಕನಾದ ಆ ಸೂರ್ಯಭೂಪತಿ ಏನೋ ಆಶೆ ತೋರಿಸಿ ತನ್ನ ಕಡೆಗೆ ಮಾಡಿಕೊಂಡಹಾಗಿದೆ. ಮೊದಲು ನಾವು ಆ ದ್ರೋಹಿಯನ್ನು ಹುಡುಕಿ ಹಿಡಿಯಬೇಕು." ಎಂದನು.

ಕಾಳೀವರ್ಮನು ಕರಡಿಕೆಂಗಣ್ಣನನ್ನು ನೋಡಿ, "ಗುರುಗಳೇ, ಕೇಳಿದಿರಷ್ಟೆ? ಈಗ ನಿಮ್ಮ ಆಜ್ಞೆ ಏನು?" ಎಂದು ಕೇಳಿದನು.

ಕರಡಿಕೆಂಗಣ್ಣನು ಥಕ್ಕನೆ ಏನೂ ಹೇಳದೆ ಮಂಟಪದ ಮುಂದಿನ ಗೋಡೆಗೆ ಒರಗಿ ನಿಂತು ಸಮೀಪದಲ್ಲಿ ಕಾಣುವ ಕೋಟೆಯ ಗೋಡೆಗಳನ್ನೇ ನೋಡತೊಡಗಿದನು.

ಅವನಿಗೆ ತನ್ನ ಮಂತ್ರದಂಡವು ಕೈತಪ್ಪಿಹೋಯಿತೆಂದು ಚಿಂತೆ ಹಿಡಿದಿತ್ತು. ಅದನ್ನು ಹುಡುಕುತ್ತ ತಾನು ಆ ಪ್ರಾಂತವನ್ನು ಬಿಟ್ಟು ಹೋಗಿಬಿಟ್ಟರೆ ದುರ್ಮುಖರಾಜನು ಶತ್ರುಗಳ ಕೈಗೆ ಸಿಕ್ಕಿ ಸಾಯುವ ಹಾಗಾದೀತು. ಈಗಿನ ಪರಿಸ್ಥಿತಿಯಲ್ಲಿ ಕಾಳೀವರ್ಮ ಕೂಡಾ ತನ್ನ ಗುರುವಾದ ಭಲ್ಲೂಕಪಾದರಿರುವ ಪ್ರಾಂತಕ್ಕೆ ಬರಲು ನಿರಾಕರಿಸಬಹುದು...

ಹೀಗೆ ಆಲೋಚಿಸುತ್ತ ಕರಡಿ ಕೆಂಗಣ್ಣನು ಕಾಳೀವರ್ಮನನ್ನು ನೋಡಿ, "ಕಾಳೀವರ್ಮಾ! ನನ್ನ ಆಜ್ಞೆಯ ವಿಷಯ ಹಾಗಿರಲಿ. ನೀನು ಏನು ಮಾಡಬೇಕೆಂದಿರುವಿಯೋ ಅದನ್ನು ಮೊದಲು ಹೇಳು." ಎಂದು ಕೇಳಿದನು.

ಗುರುವಿನ ಅಭಿಪ್ರಾಯ ಕೇಳಿ ಕಾಳೀವರ್ಮನು ಆಶ್ಚರ್ಯಪಡುತ್ತ, "ಗುರುಗಳೇ ಇದೇನು ಕೇಳಿದಿರಲ್ಲ! ಒಂದುಸಾರಿ ನನ್ನನ್ನು ನಿಮ್ಮ ಗುರುಗಳಾದ ಭಲ್ಲೂಕಮಹಾಪಾದರಿರುವ ಪರ್ವತಕ್ಕೆ ಬರಬೇಕೆಂದಿದ್ದೀರಿ. ಆ ಮಾತನ್ನು ಮರೆತಿರಾ?" ಎಂದನು.

ಕರಡಿಕೆಂಗಣ್ಣನು ಆನಂದದಿಂದ ತಲೆಯೊಲಿಯುತ್ತ, "ಆಹಾ! ನೀನೇ ನಿಜವಾದ ಶಿಷ್ಯ. ನಿನ್ನ ಗುರುಭಕ್ತಿ ಮೆಚ್ಚತಕ್ಕದ್ದು. ಅಂತಲೇ ನನ್ನ ಮನೋಭಾವ ನಿನಗೂ ತಿಳಿಯುತ್ತದೆ. ನನ್ನ ಗುರುಗಳಾದ ಭಲ್ಲೂಕಪಾದರು ಒಬ್ಬ ದುಷ್ಟ ತಾಂತ್ರಿಕನಿಂದಾಗಿ ಪ್ರಸ್ತುತ ಕಷ್ಟದಲ್ಲಿದ್ದಾರೆ. ಅವರಿಗೆ ನಿನ್ನಂತಹ ಧೈರ್ಯ ಸಾಹಸವುಳ್ಳವನ ಸಹಾಯ ಸ್ವಲ್ಪ ಬೇಕಾಗುತ್ತದೆ. ಅದಕ್ಕೆ ಪ್ರತಿಫಲವಾಗಿ ನಿನಗೇನು ಬೇಕು ಕೇಳು. ಕೊಡಿಸುತ್ತೇನೆ." ಎಂದನು.

ಕಾಳೀವರ್ಮನು ಸ್ವಲ್ಪ ಯೋಚಿಸಿ, "ಗುರುಗಳೇ.. ಪ್ರತಿಫಲದ ವಿಷಯ ಆಮೇಲೆ ನೋಡೋಣ, ಆ ಜಿತಕೇತು ರಾಜನು ನನಗೆ ಶಿರಚ್ಛೇದ ಶಿಕ್ಷೆ ವಿಧಿಸಿದಾಗ ಅದನ್ನು ತಪ್ಪಿಸುವುದರಲ್ಲಿ ನೀವು ನನಗೆ ಬಹಳ ಸಹಾಯಮಾಡಿದಿರಿ. ಆಗಲೇ ನಿಮಗೆ ಎಲ್ಲಾ ವಿಧದಲ್ಲಿ

ಸಹಾಯಕನಾಗಿರುವೆನೆಂದು ಮಾತು ಕೊಟ್ಟೆನು. ನಾನು ನಿಮ್ಮ ಆಜ್ಞಾಧೀನನು ಈಗ ಏನುಮಾಡ ಬೇಕೆಂದು ಅಪ್ಪಣೆ ಕೊಡಿರಿ" ಎಂದನು.

"ಹಾಗಾದರೆ ನೀನು ನನ್ನ ಜತೆಯಲ್ಲಿ ಬ್ರಹ್ಮ ಪುತ್ರಾ ನದಿಯ ಜನ್ಮಸ್ಥಳ ಪ್ರಾಂತದಲ್ಲಿರುವ ಭಲ್ಲೂಕ ಪಾದ ಪರ್ವತದ ಕಡೆಗೆ ಬರಬೇಕು." ಎಂದನು ಕರಡಿ ಕೆಂಗಣ್ಣ.

"ನಡೆಯಿರಿ ಹಾಗಾದರೆ, ಹೋಗೋಣ. ಇಲ್ಲಿಯ ಗೊಡವೆಯಲ್ಲಿ ವೃಥಾ ಕಾಲಹರಣ ಮಾಡುವು ದೇಕೆ ಇನ್ನು?" ಎಂದು ಕಾಳೀವರ್ಮನು ಕದಲಿದನು.

ಇದನ್ನು ನೋಡಿ ದುರ್ಮುಖರಾಜನು ಸರ್ವಾಂಗ ಕಂಪಿಸುತ್ತ, "ಮಾಂತ್ರಿಕ ಮಹಾಪ್ರಭುವೇ! ನೀವು ಈ ದೀನರಾಜನ ವಿಷಯ ಅಂತರದಲ್ಲಿ ಬಿಟ್ಟು ಹೋಗುವಿರಲ್ಲಾ! ಈ ಸ್ವಲ್ಪಮಾತ್ರ ಸೈನಿಕರನ್ನಿಟ್ಟು ಕೊಂಡು ನಾನು ರಾಜನಾಗಿರುವುದು ಅಸಾಧ್ಯ. ಇದೇನೂ ಬೇಡ. ನಾನೂ ತಮ್ಮೊಂದಿಗೇ ಭಲ್ಲೂಕ ಪಾದ ಪರ್ವತಕ್ಕೆ ಬರುತ್ತೇನೆ. ರಾಜ್ಯವು ಹೇಗೆ ಬೇಕಾದರೂ ಹೋಗಲಿ." ಎಂದನು.

ಕರಡಿಕೆಂಗಣ್ಣ ಮಾಂತ್ರಿಕನು ರಾಜನಿಗೆ ಉತ್ತರ ಕೊಡುವುದರೊಳಗೆ, ಕಟುಕಕರಡಿಯುವನು ಕೊಡಲಿ ಯನ್ನು ನೆಲಕ್ಕೆ ಕುಕ್ಕಿ ಅಳುಗೊರಲಿನಿಂದ ಕೈಜೋಡಿಸಿ, "ಅಯ್ಯಾ, ಮಾಂತ್ರಿಕ ಗುರುಗಳೇ! ನನ್ನ ಗತಿ ಏನು? ನೀವೆಲ್ಲಾ ಇಲ್ಲಿಂದ ಹೋದಮೇಲೆ ನನ್ನ ಹಳೆಯ ಯಜಮಾನ ಜಿತಕೇತುರಾಜ ನನ್ನನ್ನು ಸುಮ್ಮನೆ ಬಿಡುವನೇ? ತನ್ನ ಆಜ್ಞೆಯನ್ನು ಧಿಕ್ಕರಿಸಿ ಹೀಗೆಲ್ಲಾ ಮಾಡಿದುದಕ್ಕೆ ನನ್ನನ್ನು ಕಾಡು ಮೃಗದ ಹಾಗೆ ಬೇಟೆಯಾಡುತ್ತಾನಲ್ಲಾ! ನಾನೂ ಕರಡಿ ಮುಖದವ ನಾಗಿಯೇ ಉಳಿದಿದ್ದೇನೆ. ಈ ಸ್ಥಿತಿಯಲ್ಲಿ ಊರೊಳಗೆ ಹೇಗೆ ಹೋಗಲಿ ? ನನ್ನನ್ನೂ ನಿಮ್ಮೊಂದಿಗೇ ಕರೆದು ಕೊಂಡು ಹೋಗಿರಯ್ಯಾ!" ಎಂದನು.



ಕರಡಿಕೆಂಗಣ್ಣನು ಮುಗುಳು ನಗುವಿನೊಂದಿಗೆ ತಲೆದೂಗುತ್ತ, ಕಟುಕಕರಡಿಯುವನ ಬೆನ್ನನ್ನು ನೀವುತ್ತ, "ಹೆದರಬೇಡವೋ ನನ್ನ ಭಲ್ಲೂಕಾ! ನಾನು ನಿನ್ನನ್ನೂ ದುರ್ಮುಖ ರಾಜನನ್ನೂ ಮರೆತುಬಿಟ್ಟೆನೆಂದುಕೊಳ್ಳ ಬೇಡ. ನಿಮ್ಮಿಬ್ಬರ ಕ್ಷೇಮವನ್ನು ನಿರ್ಣಯಿಸಿದ ಮೇಲೆಯೇ ನಾನು ಈ ಪ್ರಾಂತದಿಂದ ಹೊರಟು ಹೋಗುವುದು. ಚಂದ್ರಶಿಲಾ ನಗರದ ರಾಜನಾದ ಆ ಜಿತಕೇತು ಕಾಳೀವರ್ಮನನ್ನು ಮಾತ್ರವಲ್ಲ, ನನ್ನನ್ನೂ ಅವಮಾನಿಸಿದ್ದಾನೆ. ನಾವು ಮೊದಲು ಆ ನಗರಕ್ಕೆ ಹೋಗಿ ಅವನ ಅಳವೆಷ್ಟೆಂದು ನೋಡ ಬೇಕಾಗಿದೆ" ಎಂದನು.

"ಆ ಸೊಕ್ಕು ಹಿಡಿದ ರಾಜನ ಮಂತ್ರಿಯೊಬ್ಬ ಜೀವಗುಪ್ತನೆಂಬವನು ಸ್ವಲ್ಪ ಸೈನಿಕರೊಂದಿಗೆ ಬಂದು ಈ ಕೋಟೆಯ ಹೊರಗೆ ಕಾವಲು ಕುಳಿತಿದ್ದಾನೆ. ಅವನು ಹಠಾತ್ತಾಗಿ ನಮ್ಮ ಮೇಲೆ ಬೀಳಲು ಹೊಂಚು ಹಾಕುವುದೆಂದು ಗೊತ್ತಾಗಿ, ಉಗ್ರದಂಡ



ರಾಕ್ಷಸನು ಅಡ್ಡ ನಿಂತಿದ್ದಾನೆ. ಇಲ್ಲಿ ಈ ಕೋಟೆಯೊಳಗೆ ಸಾಮಂತ ಸೂರ್ಯಭೂಪತಿಯೂ, ಮಾಯಾಮರ್ಕಟವೂ ಎಲ್ಲಿ ಯಾವ ಮೂಲೆಯಲ್ಲಿ ಅಡಗಿದ್ದಾರೋ ಗೊತ್ತಾಗುವುದಿಲ್ಲ. ಹೀಗಿದೆ ಪರಿಸ್ಥಿತಿ" ಎಂದನು ಕಾಳೀವರ್ಮ.

ಕಟುಕಕರಡಿಯುವನು ಉತ್ಸಾಹದಿಂದ ಚಪಗೊಡಲಿಯನ್ನು ಬೀಸಿ ಹೆಗಲಿಗೇರಿಸಿಕೊಂಡು, "ಕಾಳೀವರ್ಮ ದೊರೆಗಳೇ! ನಾನು ಆನೆಯ ಮೇಲೆ ಮುಂದಾಗಿ ಕೋಟೆಯ ಹೊರಗೆ ಹೋಗಿ ಅಲ್ಲಿಯ ಸ್ಥಿತಿ ಹೇಗಿದೆಯೆಂದು ನೋಡುತ್ತೇನೆ. ಉಗ್ರದಂಡ ರಾಕ್ಷಸನಿಗೆ ನಾನು ಸಹಾಯಕನಾಗಿ ಬಂದುದನ್ನು ನೋಡಿದ ಕೂಡಲೇ ಆ ಜೀವಗುಪ್ತ ಮಂತ್ರಿಯೂ ಅವನ ಸೈನಿಕರೂ ಹೆದರಿ ಓಡಿಹೋದರೂ ಹೋದಾರು. ಹಾಗೆ ಹೋದರೆ ಹೊರಗಿನ ಕಾಟ ತೀರುತ್ತದೆ. ಅಪ್ಪಣೆಯೆ?" ಎಂದನು. "ಸರಿ. ನೀನು ಹಾಗೇ ಮಾಡು. ನಾವು ಒಂದು ಸಾರಿ ಕೋಟೆಯೊಳಗಿನ ಸಂದುಗೊಂದುಗಳಲ್ಲೆಲ್ಲಾ ಆ ಸಾಮಂತನನ್ನೂ, ಮಾಯಾಮರ್ಕಟನನ್ನೂ ಗಾಳಿಸಿ ನೋಡಿ ಹೊರಗೆ ಬರುತ್ತೇವೆ." ಎಂದನು ಕಾಳೀವರ್ಮ.

ಕೂಡಲೇ ಕಟುಕಕರಡಿಯುವನು, "ಎಲೋ! ಆಟವಿಕ ಸೇವಕಾ! ಎಲ್ಲಿ ನನ್ನ ಆನೆ! ಅದನ್ನು ಮಂಟಪದ ಮುಂದೆ ತಾರೋ!" ಎಂದು ಕೂಗಿ ಹೇಳಿದನು.

ಆಟವಿಕನು ಆನೆಯನ್ನು ತಂದು ನಿಲ್ಲಿಸಿದ ಕೂಡಲೇ ಕಟುಕಕರಡಿಯುವನು ಅದರ ಮೇಲೆ ಏರಿ ಕುಳಿತನು. ಅದುವರೆಗೂ ಮೌನವಾಗಿದ್ದು ಎಲ್ಲವನ್ನೂ ಲಕ್ಷ್ಯಗೊಟ್ಟು ಕೇಳುತ್ತಿದ್ದ ದುರ್ಮುಖರಾಜನು, ಕರಡಿಕೆಂಗಣ್ಣನನ್ನು ನೋಡಿ, "ಅಯ್ಯಾ ಮಾಂತ್ರಿಕ ಪ್ರಭುವೇ! ನಾನು ಈ ಸ್ವಲ್ಪ ಮಾತ್ರ ಸೈನಿಕರೊಂದಿಗೆ ಈ ಕೋಟೆಯೊಳಗಿರುವುದು ಕ್ಷೇಮವಲ್ಲವೆಂದೇ ಕಾಣುತ್ತದೆ. ನಿಮ್ಮೊಂದಿಗೆ ನಾನೂ ಚಂದ್ರಶಿಲಾ ನಗರಕ್ಕೇ ಬರುತ್ತೇನೆ. ಜೀವ ಉಳಿದರೆ ಎಂದಾದರೂ ರಾಜ್ಯ ಬಂದೀತು!" ಎಂದನು.

"ನಾನು ಕೂಡಾ ಅದನ್ನೇ ಹೇಳಬೇಕೆಂದಿದ್ದೆ. ನಿನ್ನ ಕೇವಲ ನಾಲ್ವತ್ತುಮಂದಿ ಸೈನಿಕರೊಂದಿಗೆ ನೀನು ಹೊಸದಾಗಿ ಒಂದು ರಾಜ್ಯವನ್ನೇ ಜಯಿಸಲಿರುವಿ. ಹಾಗಾದರೆ ನಿನಗೆ ಸಂತೋಷ ತಾನೇ?" ಎಂದನು ಕರಡಿಕೆಂಗಣ್ಣ.

ದುರ್ಮುಖರಾಜನಿಗೆ ಸಂತೃಪ್ತಿಯಿಂದ ಉಸಿರೇ ಸಿಕ್ಕಿಕೊಂಡ ಹಾಗಾಗಿ ಕಣ್ಣಗಲಿಸಿ ನೋಡುತ್ತಾ ಸುಮ್ಮನಿದ್ದ. ಆ ಮೇಲೆ ಎಲ್ಲರೂ ಸಭಾಮಂಟಪದಿಂದ ಕೆಳಗಿಳಿದು ಬಂದು, ಸಾಮಂತನನ್ನೂ, ಮರ್ಕಟದವನನ್ನೂ ಹುಡುಕಲು ಆಜ್ಞೆಗಳನ್ನು ಹೊರಡಿಸ ತೊಡಗಿದರು.

ಆಗ ಕೋಟೆಯ ಗೋಡೆಯ ಮೇಲೆ ಹತ್ತಿ ಬಂದ ದುರ್ಮುಖರಾಜನ ಅಂಗರಕ್ಷಕರಿಬ್ಬರು ಏಕಕಂಠದಿಂದ "ಮಹಾರಾಜರೇ! ದ್ರೋಹಿಯಾದ ಸಾಮಂತ

ಸೂರ್ಯಭೂಪತಿಯೂ, ಮಾಯದ ಕೋತಿಯೂ ಜಿತಕೇತು ರಾಜನ ಮಂತ್ರಿಯ ಬದಿಯಲ್ಲಿ ಸೇರಿಕೊಂಡಿದ್ದಾರೆ. ಅವರು ನಮ್ಮ ರಾಕ್ಷಸನೊಂದಿಗೆ ಏನೋ ಮಾತಾಡಿಕೊಳ್ಳುತ್ತಿದ್ದಾರೆ." ಎಂದು ಕೂಗಿ ಹೇಳಿದರು.

"ಹಾಗೇನು? ನನಗೂ ಹಾಗೆ ಅನುಮಾನ ಬಾರದೆ ಹೋಗಲಿಲ್ಲ. ಹಾಗಾದರೆ ನಮಗೆ ಒಳಗೆ ವೃಥಾ ಹುಡುಕುವ ಶ್ರಮ ತಪ್ಪಿತು. ಸುಟ್ಟು ಹೋದ ಕೋಟೆಯ ದ್ವಾರದ ಹತ್ತಿರ ಬಲವಾದ ಕಾವಲಿಡಬೇಕು. ಬಹುಶಃ ಆ ದುಷ್ಟರೆಲ್ಲ ಸೇರಿ ಉಗ್ರದಂಡ ರಾಕ್ಷಸನನ್ನು ಸಹಾ ಒಳಪಡಿಸಿಕೊಳ್ಳುವ ತಂತ್ರ ಮಾಡುತ್ತಿರಬೇಕು. ಆದರೆ ರಾಕ್ಷಸನು ಸೀದಾ ಗುಣದವನಾಗಿ ಕಾಣುತ್ತಾನೆ. ಹಾಗೆಲ್ಲಾ ನಮ್ಮ ಶತ್ರುಗಳೊಂದಿಗೆ ಸೇರಿ ಮಿತ್ರ ದ್ರೋಹಿಯಾಗಲಾರ." ಎಂದನು ಕಾಳೀವರ್ಮ.

"ನಿಜ. ಅವರ ಪ್ರಯತ್ನಗಳು ಫಲಿಸುವಂಥವಲ್ಲ. ಆ ರಾಕ್ಷಸನು ನನ್ನಿಂದ ಏನೋ ಸಹಾಯದ ಅಪೇಕ್ಷೆಯಲ್ಲಿದ್ದಾನೆ. ನೋಡೋಣ, ನಾವೀಗ ಅತ್ತಲೇ ಹೊರಡುವಾ" ಎಂದನು ಕರಡಿಕೆಂಗಣ್ಣ. ಕಾಳೀವರ್ಮನು ಊಹಿಸಿದಂತೆ ಜಿತಕೇತುರಾಜನ ಮಂತ್ರಿ ಜೀವಗುಪ್ತನು ಉಗ್ರದಂಡ ರಾಕ್ಷಸನಿಗೆ ದೊಡ್ಡ ದೊಡ್ಡ ಆಶೆಗಳನ್ನು ತೋರಿಸಿ ತನ್ನ ಪಕ್ಷಕ್ಕೆ ಸೇರಿಸಿಕೊಳ್ಳುವ ಪ್ರಯತ್ನಮಾಡುತ್ತಿದ್ದನು. ಅದಕ್ಕೆ ಮಾಯಾಮರ್ಕಟ ರೂಪದಲ್ಲಿರುವ ಭ್ರಾಂತಿಮತಿಯೂ ಧೂಪ ಹಾಕುತ್ತಿದ್ದನು.

ರಾಕ್ಷಸನು ಕಡೆಗೆ ತನ್ನ ಕಲ್ಲಿನ ಗದೆಯನ್ನು ಮೇಲೆತ್ತಿ ಹಿಡಿದು, "ನನಗೆ ನಿಮ್ಮ ಯಾರಿಂದಲೂ ಯಾವ ಬಗೆಯ ಸಹಾಯದ ಆಗತ್ಯವೂ ಇಲ್ಲ. ನನಗೆ ಬೇಕಾದ್ದು ನನ್ನ ಬಂಧುವಿನ ಬಂಧ ವಿಮೋಚನೆ. ಅವನು ಭಲ್ಲೂಕಪಾದ ಪರ್ವತದಲ್ಲಿ ಸಿಕ್ಕಿಕೊಂಡಿದ್ದಾನೆ. ಅದಕ್ಕೆ ನಿಮ್ಮಿಂದೇನೂ ಸಹಾಯವಾಗದು." ಎಂದು ದೊಡ್ಡದೊಂದು ಉಸಿರುಬಿಟ್ಟನು.



ಆ ಮಾತು ಕೇಳಿ ಮಾಯಾಮರ್ಕಟನು ವ್ಯಂಗ್ಯ ಭಾವದಿಂದ ಕಿಚಕಿಚನೆ ಕಿರಿಚಿ, "ಉಗ್ರದಂಡಾ! ಆ ಬಂಧು ನಿನ್ನ ಅಣ್ಣ ತಾನೇ? ಇನ್ನು ಅವನಿಗೆ ಬಂಧವೆಲ್ಲಿ, ಮುಕ್ತಿ ಎಲ್ಲಿ? ನನ್ನ ಗುರುಗಳಾದ ತಾಂತ್ರಿಕ ಮಿಥ್ಯಾಮಿಶ್ರರು ಅವನನ್ನು ಎಂದೋ ಭೂಸ್ಥಾಪನೆ ಮಾಡಿದ್ದಾರೆ. ನೀನು ಆ ಗೊಡವೆ ಬಿಟ್ಟು ಇಲ್ಲಿಯೇ ಜಿತಕೇತು ಮಹಾರಾಜರ ಆಶ್ರಯದಲ್ಲಿ ನಿಮ್ಮ ಹಳೆಯಕಾಲದ ವೈಭವ ಅನುಭವಿಸುತ್ತ ಸುಖವಾಗಿರುವುದು ಒಳ್ಳೆಯದು. ಯೋಚನೆ ಮಾಡು." ಎಂದನು. "ಏನಂದೆ? ನನ್ನ ಅಣ್ಣನನ್ನು ಆ ಘೋರ ತಾಂತ್ರಿಕನು ನಿಜಕ್ಕೂ ಕೊಂದನೆ? ಅಥವಾ ನೀನು ಸುಳ್ಳು ಹೇಳಿ ನನ್ನ ಮನಸ್ಸಿನೊಂದಿಗೆ ಆಟ ಆಡುವಿಯಾ? ಬೊಗಳು ಸತ್ಯ ಸಂಗತಿಯನ್ನು!" ಎಂದು ಉಗ್ರದಂಡನು ಹಲ್ಲು ಕಡಿದನು.

ಮಾಯಾಮರ್ಕಟನು ಏನೋ ಹೇಳಲು ಬಾಯಿ ತೆರೆದಾಗ ಜೀವಗುಪ್ತ ಮಂತ್ರಿ ಅವನನ್ನು ಸುಮ್ಮನಿರಿಸಿ.

"ಉಗ್ರದಂಡಾ! ಆಗಿ ಹೋದುದನ್ನೆಲ್ಲ ಮರೆತು ಬಿಡು. ನಮ್ಮ ರಾಜ್ಯದಲ್ಲಿ ಮಹಾ ಬಲಶಾಲಿಯಾದ ರಾಕ್ಷಸನೊಬ್ಬನು ಇರುವುದೆಂದರೆ ನಮಗೆ ಹೆಮ್ಮೆಯ ವಿಷಯ. ನೀನು ಕೂಡಾ ನಮ್ಮ ರಾಜರ ಆಶ್ರಯದಲ್ಲಿ ಬೇಕಾದ ಹಾಗೆ ತಿಂದುಂಡು ಕೊಂಡು ನೆಮ್ಮದಿಯಾಗಿರಬಹುದು. ಕಾಡಿನೊಳಗಿನ ಗುಹಾವಾಸದಲ್ಲಿ ನಿದ್ರಾಹಾರಗಳಿಗೆ ಪೇಚಾಡುತ್ತ ಏನು ಸುಖವಿದೆ ಹೇಳು? ಮಹಾರಾಜರು ನಿನಗೊಂದು ಅರಮನೆಯನ್ನೇ ಕೊಟ್ಟುಬಿಡುತ್ತಾರೆ." ಎಂದನು.

"ಅಂದರೆ, ನನ್ನಿಂದ ಯಾವ ಸಹಾಯವನ್ನೂ ಹೊಂದದೆಯೇ ನಿಮ್ಮ ರಾಜನು ನನಗೆ ಸುಮ್ಮನೆ ಆತಿಥ್ಯ ಕೊಡುತ್ತಾನೆಂದಾಯಿತು. ಹೌದೇನು?" ಎಂದ ಉಗ್ರದಂಡ.

"ನಿನ್ನ ಸಹಾಯ ಇಲ್ಲವೆಂದರೇನರ್ಥ? ನಿನ್ನಿಂದ ಒಂದೇ ಒಂದು ಸಹಾಯ, ಅದುವೇ ಬ್ರಹ್ಮಾಂಡದಷ್ಟಾಯಿತು. ನಾವೀಗ ಈ ಕೋಟೆಗೆ ಪ್ರವೇಶಿಸುತ್ತೇವೆ. ಅಲ್ಲಿರುವ ಕರಡಿಕೆಂಗಣ್ಣನೆಂಬ ಮಾಂತ್ರಿಕನನ್ನೂ, ಕಾಳೀವರ್ಮನೆಂಬ ಅಪರಾಧಿಯನ್ನೂ, ದುರ್ಮುಖರಾಜನನ್ನೂ ಸೀಳಿ ಚೆಂಡಾಡಲಿಕ್ಕೆ ನೀನು ಸಹಾಯಮಾಡಿದರೆ ಸಾಕು. ಅದೇನೂ ಸಾಮಾನ್ಯ ಸಹಾಯವಲ್ಲವಷ್ಟೆ? ಆ ಜನ್ಮ ನಾವು ನಿನಗೆ ಋಣಿಗಳು!" ಎಂದ ಜೀವಗುಪ್ತಮಂತ್ರಿ.

"ಓಹೋ!" ಎಂದು ರಾಕ್ಷಸನು ಕೋಟೆಯ ಕಡೆಗೆ ತಿರುಗಿದನು. ಆಗ ಕೋಟೆಯೊಳಗಿನಿಂದ ಕೋಣನ ಮೇಲೆ ಕರಡಿಕೆಂಗಣ್ಣ, ಮೊದಲಾದವರು ಹೊರಗೆ ಬರುವುದು ಕಂಡಿತು. ಆ ದೃಶ್ಯವನ್ನು ನೋಡಿ ಜೀವಗುಪ್ತಮಂತ್ರಿ ಹೆದರಿ, ಏನುಮಾಡುವುದೆಂದು ಆಲೋಚಿಸುತ್ತ, ತನ್ನ ಪಕ್ಕದಲ್ಲೇ ಕುದುರೆಯ ಮೇಲಿದ್ದ ಮಾಯಾಮರ್ಕಟನನ್ನೂ, ಸಾಮಂತ ಸೂರ್ಯಭೂಪತಿಯನ್ನೂ ನೋಡಿದನು.

ಆಗ ಸೂರ್ಯಭೂಪತಿ ರಾಕ್ಷಸನನ್ನು ನೋಡಿ, "ಈಗಲೇ ನಿನ್ನ ಬಲವನ್ನು ಪ್ರದರ್ಶಿಸು." ಎಂದನು.

"ಹೌದು! ಆಗೋ ನೋಡು! ಅಲ್ಲಿ ಬರುವವರನ್ನು ನಿನ್ನ ಕಲ್ಲಿನ ಗದೆಯಿಂದ ನೆಲಕ್ಕೊರೆಸಿಬಿಡು!" ಎಂದನು ಮಾಯಾಮರ್ಕಟ.

ಉಗ್ರದಂಡ ರಾಕ್ಷಸನು ಒಂದುಸಾರಿ ಹೂಂಕರಿಸಿ, "ಮಂತ್ರೀ! ನಿನಗೂ ನಿನ್ನೊಂದಿಗಿರುವ ದುಷ್ಟಗಣಗಳಿಗೂ ನಾನು ಮಾಡುವ ಸಹಾಯ ಏನೆಂದು ಗೊತ್ತಾಯಿತೇ? ಇಕೋ ನೋಡು ಇದೇ!" ಎಂದು ಕಲ್ಲಿನ ಗದೆಯನ್ನೆತ್ತಿ ಕುದುರೆಯ ಮೇಲಿದ್ದ ಮಾಯಾಮರ್ಕಟನ ತಲೆಗೆ ಬೀಸಿದನು. ಅಷ್ಟರೊಳಗೆ ಮಾಯಾಮರ್ಕಟನು ಕೀಚ್ಚೆಂದು ಕಿರಿಚಿ ಮಿಂಚಿನ ವೇಗದಲ್ಲಿ ಕೆಳಗೆ ಹಾರಿದುದರಿಂದ, ಗದೆಯ ಪೆಟ್ಟು ಅವನ ಕುದುರೆಯ ತಲೆಗೆ ಠಪಾಲ್ಲನೆ ತಾಕಿತು. —(ಇನ್ನೂ ಇದೆ)

